# ಕನ್ನಡ ಜಾಗೃತಿ ಕೇಂದ್ರ : ಚಿಂಚಣಿ ಮಠ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧನ ವಿದ್ಯಾರ್ಥಿ
**ಶ್ರೀಶೈಲ ಗು. ಮಠಪತಿ**

ಮಾರ್ಗದರ್ಶಕರು
**ಡಾ.ಬಿ.ಎಂ. ಪಾಟೀಲ**

ಕನ್ನಡ ವಿಭಾಗ
**ಶ್ರೀ ಬಿ.ಆರ್. ದರೂರ ಸಂಶೋಧನ ಕೇಂದ್ರ,**
**ಹಾರೂಗೇರಿ.** ತಾ.ರಾಯಬಾಗ

ಸಾಹಿತ್ಯ ಅಧ್ಯಯನ ವಿಭಾಗ

**ಸಂಯೋಜನೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ.**
ವಿದ್ಯಾರಣ್ಯ – ೫೮೩ ೨೭೬

**೨೦೦೮**

# ಕನ್ನಡ ಜಾಗೃತಿ ಕೇಂದ್ರ : ಚಿಂಚಣಿ ಮಠ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಸಂಪ್ರಬಂಧ)


ಸಂಶೋಧನ ವಿದ್ಯಾರ್ಥಿ

**ಶ್ರೀಶೈಲ ಗು. ಮಠಪತಿ**

ಮಾರ್ಗದರ್ಶಕರು

**ಡಾ.ಬಿ.ಎಂ. ಪಾಟೀಲ**

ಕನ್ನಡ ವಿಭಾಗ

**ಶ್ರೀ ಬಿ.ಆರ್. ದರೂರ ಸಂಶೋಧನ ಕೇಂದ್ರ,**

**ಹಾರೂಗೇರಿ.** ತಾ.ರಾಯಬಾಗ



ಸಾಹಿತ್ಯ ಅಧ್ಯಯನ ವಿಭಾಗ

**ಸಂಯೋಜನೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ.**

ವಿದ್ಯಾರಣ್ಯ - ೫೮೩ ೨೭೬

**೨೦೦೮**

# ಪ್ರಮಾಣ ಪತ್ರ

**ಕನ್ನಡ ಜಾಗೃತಿ ಕೇಂದ್ರ : ಚಿಂಚಣಿ ಮಠ** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಡಾ. ಬಿ.ಎಂ.ಪಾಟೀಲ ಅವರ ಮಾರ್ಗದರ್ಶನದಲ್ಲಿ ನಾನು ಸಿದ್ಧಪಡಿಸಿದ್ದೇನೆ. ಹಾರೂಗೇರಿಯ, ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯದ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲ ಮತ್ತು ಈ ಮೊದಲು ಇದನ್ನು ಇಡಿಯಾಗಿ ಇಲ್ಲವೆ ಬಿಡಿಯಾಗಿ ಪ್ರಕಟಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಹಾರೂಗೇರಿ<br>
ದಿನಾಂಕ : ೨೪-೦೯-೨೦೦೮

**ಶ್ರೀಶೈಲ ಗು. ಮಠಪತಿ**<br>
ಸಂಶೋಧನ ವಿದ್ಯಾರ್ಥಿ<br>
ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ,<br>
ಹಾರೂಗೇರಿ.

# ದೃಢೀಕರಣ ಪತ್ರ

ಶ್ರೀಶೈಲ ಗು. ಮಠಪತಿ ಇವರು **ಕನ್ನಡ ಜಾಗೃತಿ ಕೇಂದ್ರ : ಚಿಂಚಣಿ ಮಠ** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಾರೂಗೇರಿಯ ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯದ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಇವರು ಈ ಮೊದಲು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲ ಮತ್ತು ಇದು ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ಹಾರೂಗೇರಿ

ದಿನಾಂಕ : ೨೨-೦೮-೨೦೦೮

**ಡಾ.ಬಿ.ಎಂ.ಪಾಟೀಲ**

ಮಾರ್ಗದರ್ಶಕರು
ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ,
ಹಾರೂಗೇರಿ. ಮತ್ತು
ಪ್ರಾಚಾರ್ಯರು
ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯ,
ಮಹಾಲಿಂಗಪೂರ.

# ಪರಿವಿಡಿ

# ಅನುಬಂಧಗಳು

ಒಟ್ಟಾಗಿ ಈ ಅಧ್ಯಯನದಿಂದ ನಮಗೆ ತಿಳಿದುಬರುವುದೇನೆಂದರೆ; ಗಡಿಭಾಗದಲ್ಲಿ ಧರ್ಮ ಕಾರ್ಯಗಳೊಂದಿಗೆ ಕನ್ನಡ ಕಾರ್ಯವನ್ನು ಗೈಯ್ಯುತ್ತಿರುವ ಮಠದ ಕನ್ನಡ ಕಾಳಜಿ ತಿಳಿದು ಬರುತ್ತದೆ. ಕನ್ನಡ ಕೆಲಸ ಬಸವಣ್ಣನ ಕೆಲಸವೆಂದು ತಿಳಿದು ಗಡಿಗ್ರಾಮದಲ್ಲಿ ಚಿಂಚಣಿಮಠ ಮಾಡುತ್ತಿರುವ ಕನ್ನಡಜಾಗೃತಿ ಎಂಥವರನ್ನೂ ಆಶ್ಚರ್ಯಚಕಿತರನ್ನಾಗಿ ಮಾಡುತ್ತದೆ.

ಅಧ್ಯಾಯ ೧

# ಅಧ್ಯಯನದ ಸ್ವರೂಪ

ಕರ್ನಾಟಕದಲ್ಲಿ ಮಠಗಳು ಮೊದಲಿನಿಂದಲೂ ಧಾರ್ಮಿಕ ಕಾರ್ಯಗಳೊಂದಿಗೆ ಸಾಮಾಜಿಕ, ಸಾಂಸ್ಕೃತಿಕ, ನ್ಯಾಯದಾನ, ವಿದ್ಯಾದಾನ, ಅನ್ನದಾಸೋಹ ಮುಂತಾದ ಬಹುಪಯೋಗಿ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವುದನ್ನು ಇತಿಹಾಸದುದ್ದಕ್ಕೂ ಕಾಣಬಹುದು. ಇದೇ ರೀತಿ ವೀರಶೈವ ಲಿಂಗಾಯತ ಮಠಗಳು ಕೂಡ ಹಿಂದಿನಿಂದಲೂ ಧರ್ಮ ಪ್ರಸಾರದೊಂದಿಗೆ ಸಾಹಿತ್ಯಿಕ, ಸಾಂಸ್ಕೃತಿಕ, ಸಾಮಾಜಿಕ ಮುಂತಾದ ಜನೋಪಯೋಗಿ ಕಾರ್ಯಗಳಲ್ಲಿ ತೊಡಗಿಕೊಂಡಿರುವುದು ಚರಿತ್ರೆಯಿಂದ ತಿಳಿದುಬರುತ್ತದೆ. ಮಠಗಳ ಕಾರ್ಯಗಳ ಆಧಾರದ ಮೇಲಿಂದ ಓದಿಸುವ ಮಠ, ಸಂಪಾದನಾ ಮಠ, ಟೀಕಿನ ಮಠ, ಓಲೆ ಮಠ, ದಾಸೋಹ ಮಠ ಇನ್ನೂ ಮುಂತಾದ ಹೆಸರುಗಳು ಪ್ರಚಲಿತಗೊಂಡಿವೆ. ಅವುಗಳು ಅನುಸರಿಸಿಕೊಂಡು ಬರುತ್ತಿರುವ ಪರಂಪರೆಗಳ ಆಧಾರದ ಮೇಲಿಂದ ೧.ಗುರುವರ್ಗದ ಮಠಗಳು, ಶಿಷ್ಯ ವರ್ಗದ ಮಠಗಳು, ಪುತ್ರ ವರ್ಗದ ಮಠಗಳು ೨. ವಿರಕ್ತ ಮಠಗಳು ಎಂದು ವಿಭಾಗಿಸುತ್ತೇವೆ. ಮೊದಲ ವರ್ಗದ ಮಠಗಳಿಗೆ ಪಂಚಪೀಠಗಳು ಮೂಲವಾದರೆ; ಎರಡನೆಯ ವರ್ಗದ ಮಠಗಳಿಗೆ ಶಿವಶರಣರು ಮೂಲರಾಗಿದ್ದಾರೆ.

ವಚನಕಾರರ ನಂತರದ ಅವಧಿಯಲ್ಲಿ ವಿರಕ್ತಮಠಗಳ ಪರಂಪರೆಯು ನಿರ್ದಿಷ್ಟವಾಗಿ ತಿಳಿದುಬರುತ್ತದೆ. ಎಡೆಯೂರು ತೋಂಟದ ಸಿದ್ಧಲಿಂಗ ಯತಿಗಳು ಈ ವಿರಕ್ತ ಪರಂಪರೆಯನ್ನು ಗಟ್ಟಿಯಾಗಿ ಮುಂದುವರೆಸಿದ್ದಾರೆ. ಇವುಗಳಿಗೆ ಮುಖ್ಯ ಪ್ರೇರಣೆ ೧೨ನೆಯ ಶತಮಾನದ ಶರಣಗಣಂಗಳಲ್ಲಿ ಒಬ್ಬರಾದ ಅಲ್ಲಮಪ್ರಭುಗಳು. ಕಲ್ಯಾಣದಲ್ಲಿ ಬಸವಣ್ಣನವರು ಸ್ಥಾಪಿಸಿದ ಶೂನ್ಯಪೀಠವೇ ಮೊದಲ ವಿರಕ್ತ ಪೀಠವೆಂದು ಗುರುತಿಸುತ್ತೇವೆ. ಪ್ರಭುದೇವರು ಕನ್ಯಾಕುಮಾರಿಯಿಂದ ಹಿಮಾಚಲದವರೆಗೆ ದೇಶ ಸಂಚಾರವನ್ನು ಕೈಗೊಂಡು ಅಲ್ಲಲ್ಲಿ ಅನುಷ್ಠಾನಗೈಯ್ಯುತ್ತಾ ಮುಂದೆಸಾಗಿದ ವಿಷಯ ಶೂನ್ಯ ಸಂಪಾದನೆಯಲ್ಲಿ ಉಲ್ಲೇಖಿತಗೊಂಡಿದೆ. ಈ ರೀತಿಯಾಗಿ ಪ್ರಭುದೇವರು ಅನುಷ್ಠಾನ ಮಾಡಿದ ಸ್ಥಳಗಳು ಇಂದು ಪ್ರಭುದೇವರ ಮಠಗಳಾಗಿ ಪ್ರಸಿದ್ಧಿ ಹೊಂದಿವೆ. ಅಲ್ಲಮಪ್ರಭುಗಳ ಪರಂಪರೆ ಕರ್ನಾಟಕದಲ್ಲಿ ಬಹುವ್ಯಾಪಕವಾಗಿ ಇದ್ದ ಬಗ್ಗೆ ನಮಗೆ ಸಾಕಷ್ಟು ಆಧಾರಗಳು ದೊರೆಯುತ್ತವೆ. ಇದಕ್ಕೆ ಪೂರಕವೆಂಬಂತೆ

ಪ್ರಭುದೇವರ ಹೆಸರಿನ ದೇವಾಲಯಗಳು, ಮಠಗಳು ಅಲ್ಲಲ್ಲಿ ಅಸ್ತಿತ್ವದಲ್ಲಿರುವುದನ್ನು ಕಾಣುತ್ತೇವೆ. ಇಂತಹ ಮಠಗಳಲ್ಲಿ ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ಸಮೀಪದ ಚಿಂಚಣಿ ಮಠವು ಒಂದಾಗಿದೆ. ಚಿಂಚಣಿ ಗ್ರಾಮಕ್ಕೆ ಅಲ್ಲಮಪ್ರಭು ಸ್ವಾಮಿಗಳು ಸ್ವತಃ ಭೇಟಿ ನೀಡಿ ಅನುಷ್ಠಾನಗೈದಿದ್ದಾರೆಂಬುದಕ್ಕೆ ಸಂಬಂದಿಸಿದ ಐತಿಹ್ಯವಿದೆ. ಇದರ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆಗಳು ಆಗಬೇಕಾದ ಅಗತ್ಯವಿದೆ.

**ಉದ್ದೇಶ:**

ಈ ಅಧ್ಯಯನದ ಮುಖ್ಯ ಉದ್ದೇಶ ; ಕರ್ನಾಟಕದ ಗಡಿ ಭಾಗದ ಚಿಕ್ಕೋಡಿ ಪರಿಸರದಲ್ಲಿ ಕನ್ನಡ ನಾಡು-ನುಡಿ, ನೆಲ-ಜಲಪರವಾಗಿ ಹೋರಾಟ ಮತ್ತು ಕಾರ್ಯಕ್ರಮಗಳನ್ನು ಕೈಗೊಳ್ಳುವ ಮೂಲಕ ಚಿಂಚಣಿ ಅಲ್ಲಮಪ್ರಭು ಸಿದ್ಧಸಂಸ್ಥಾನಮಠವು ಮಾಡುತ್ತಿರುವ ಕನ್ನಡ ಜಾಗೃತಿಯನ್ನು ಪರಿಚಯಿಸುವುದಾಗಿದೆ. ಈ ಮಠವು ೧೯೭೭ರಿಂದ ಒಂದು ದಶಕದ ಕಾಲಾವಧಿಯಲ್ಲಿ ಗಡಿಭಾಗದೊಳಗೆ ಕನ್ನಡ ರಾಜ್ಯೋತ್ಸವ, ಕನ್ನಡಪರ ಹೋರಾಟ, ಸಾಹಿತ್ಯಿಕ - ಸಾಂಸ್ಕೃತಿಕ ಕಾರ್ಯಕ್ರಮ ಮುಂತಾದ ಕನ್ನಡ ಕಾರ್ಯಗಳನ್ನು ಮಾಡುವುದರ ಮೂಲಕ ಕರ್ನಾಟಕ ರಾಜ್ಯದಲ್ಲಿಯೇ ಒಂದು ವಿಶಿಷ್ಟವಾದ ಸ್ಥಾನವನ್ನು ಪಡೆದುಕೊಂಡಿದೆ. ಈ ಮಠವು ಇಂದು ನಾಡಿನ ಎಲ್ಲ ವಿಂದ್ವಾಸರ, ಸಾಹಿತಿಗಳ, ರಾಜಕಾರಣಿಗಳ, ಮಠಾಧೀಶರಿಂದ ಪ್ರಶಂಸೆಗೆ ಒಳಗಾಗಿದೆ. ಇಷ್ಟು ಕಡಿಮೆ ಕಾಲಾವಧಿಯಲ್ಲಿ 'ಕನ್ನಡ ಮಠ' ಮತ್ತು 'ಕನ್ನಡ ಸ್ವಾಮಿ'ಯಾಗಿ ರೂಪುಗೊಂಡಿರುವ ಗಡಿಭಾಗದ ಮಠ ಮತ್ತು ಸ್ವಾಮೀಜಿಯವರ ಕನ್ನಡ ಜಾಗೃತಿ ಕಾರ್ಯಗಳನ್ನು ನಾಡಿನ ಜನತೆಗೆ ಪರಿಚಯಿಸುವ ಉದ್ದೇಶದಿಂದ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಪ್ರಸ್ತುತ ಮಠವನ್ನು ಹಾಗೂ ಅದರ ಕಾರ್ಯಗಳನ್ನು ಕುರಿತು ಇದುವರೆಗೆ ಕೆಲವು ಬಿಡಿಲೇಖನಗಳು ದಿನಪತ್ರಿಕೆ, ನಿಯತಕಾಲಿಕೆ, ಸಂಪಾದಿತ ಕೃತಿಗಳಲ್ಲಿ ಸಾಂದರ್ಭಿಕವಾಗಿ ಪ್ರಕಟಗೊಂಡಿವೆ. ಸ್ವಾಮಿಜೀಯವರೊಂದಿಗೆ ನಡೆಸಿದ ಕೆಲ ಸಂದರ್ಶನಗಳು ಪ್ರಕಟಗೊಂಡಿವೆ. ೧೯೭೧ರಲ್ಲಿ ಚಿಕ್ಕೋಡಿ ಚರಮೂರ್ತಿ ಮಠದ ಶ್ರೀ.ಮ.ನಿ.ಪ್ರ. ನೀಲಕಂಠ ಸ್ವಾಮಿಗಳು ಚಿಂಚಣಿ ಶ್ರೀ ಪ್ರಭುದೇವರ ಮಠದ ಕುರಿತು ಚಿಕ್ಕ ಪರಿಚಯ ಗ್ರಂಥವನ್ನು ಬರೆದಿದ್ದಾರೆ. ಶ್ರೀ ಎಂ. ಬಿ. ಚಿಂಚಣಿ(೨೦೦೨), ಅಜೀತ ಘೋರ್ಪಡೆ (೨೦೦೩), ಶ್ರೀಪಾದ ಯರೆಕುಪ್ಪಿ (೨೦೦೩), ಚಂದ್ರಕಾಂತ ಪೋಕಳೆ (೨೦೦೩), ಎಸ್.ರೇವಣಕರ ಮತ್ತು ಎಸ್.ಆರ್.ದಲಾಲ (೨೦೦೪), ಶ್ರೀ ಅಶೋಕ ಹೊಣವಾಡ (೨೦೦೮), ವೆಂಕಟಾಚಲ ಹೆಗಡೆ(೨೦೦೫), ಬಿ.ಆರ್.ಪೋಲಿಸ್‌ಪಾಟೀಲ (೨೦೦೮),

ನೀಲಗಂಗಾ ಚರಂತಿಮಠ (೨೦೦೮), ಎಂ.ಚಿದಾನಂದ ಮೂರ್ತಿ (೨೦೦೮), ಡಾ. ತೋಂಟದ ಸಿದ್ಧಲಿಂಗ ಸ್ವಾಮಿಗಳು (೨೦೦೮), ಪ್ರೊ. ಚಂಪಾ (೨೦೦೮), ಸದಾನಂದ ಕನವಳ್ಳಿ (೨೦೦೮), ಚೆನ್ನವೀರ ಕಣವಿ (೨೦೦೮), ಬಿ.ಎ.ಸನದಿ(೨೦೦೮), ಎಂ.ಎಂ.ಕಲಬುರ್ಗಿ (೨೦೦೮), ಬಾಲ್ಕಿಯ ಶ್ರೀ ಬಸವಲಿಂಗ ಪಟ್ಟದ್ದೇವರು (೨೦೦೮) ಹೀಗೆ ಕೆಲವು ಲೇಖಕರು ಮಠದ ಮತ್ತು ಸದ್ಯದ ಪೀಠಾಧಿಪತಿಗಳ ಕನ್ನಡ ಕಾರ್ಯಗಳನ್ನು ಕುರಿತು ಲೇಖನಗಳನ್ನು ಬರೆದಿದ್ದಾರೆ. ಆದರೆ ಈ ಮಠದ ಕನ್ನಡ ಜಾಗೃತಿಯನ್ನು ಕುರಿತಾಗಿ ಪ್ರತ್ಯೇಕವಾಗಿ ವಿವರಿಸುವ ಯಾವುದೇ ಕೃತಿ ಇದುವರೆಗೆ ಪ್ರಕಟಗೊಂಡಿರಲಿಲ್ಲ. ಹಾಗಾಗಿ ಗಡಿ ಭಾಗದಲ್ಲಿರುವ ಗ್ರಾಮೀಣ ಮಠವೊಂದು ಮಾಡಿರುವ ಮತ್ತು ಮಾಡುತ್ತಿರುವ ಕನ್ನಡ ಜಾಗೃತಿಪರ ಕಾರ್ಯಗಳನ್ನು ಕೇಂದ್ರವಾಗಿಟ್ಟುಕೊಂಡು ಅಧ್ಯಯನವನ್ನು ನಡೆಸುವ ಅಗತ್ಯತೆ ಕಂಡುಬಂದಿತು. ಪ್ರಸ್ತುತ ಅಧ್ಯಯನದ ಮೂಲಕ ಅಂತಹ ಅಗತ್ಯವನ್ನು ಪೂರ್ಣಗೊಳಿಸಲು ಪ್ರಯತ್ನಿಸಲಾಗಿದೆ.

**ವ್ಯಾಪ್ತಿ:**

ಈ ಅಧ್ಯಯನದ ವ್ಯಾಪ್ತಿಯು ಸ್ಪಷ್ಟವಾಗಿದೆ ಮತ್ತು ಒಂದು ಮಿತಿಗೊಳಪಟ್ಟಿದೆ. ಚಿಂಚಣಿ ಮಠವು ಈ ಭಾಗದಲ್ಲಿ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ಯಿಕ, ಕಲಾತ್ಮಕ, ಪರಿಸರಾತ್ಮಕ ಹಾಗೂ ನಾಡು-ನುಡಿ ಕುರಿತಾಗಿ ಬಹುಮುಖಿಯಾಗಿ ಕಾರ್ಯೋನ್ಮುಖವಾಗಿದೆ. ಪ್ರಸ್ತುತ ಅಧ್ಯಯನದ ವ್ಯಾಪ್ತಿಗೆ ಕೇವಲ ಕನ್ನಡ ಜಾಗೃತಿಗೆ ಪೂರಕವಾದ ಕನ್ನಡ ನಾಡು-ನುಡಿ, ನೆಲ-ಜಲ, ಸಂಘ-ಸಂಸ್ಥೆಗಳ ಕಾರ್ಯಗಳು ಮತ್ತು ಹೋರಾಟಗಳು ಒಳಪಡುತ್ತವೆ. ಬೇರೆ ಬೇರೆ ಸಮಾಜೋಪಯೋಗಿ ಹಾಗೂ ಧಾರ್ಮಿಕ ಕಾರ್ಯಗಳಿದ್ದರೂ ಸಹ ಅವುಗಳನ್ನು ಇಲ್ಲಿ ಗಣನೆಗೆ ತೆಗೆದುಕೊಂಡಿಲ್ಲ. ಹೆಚ್ಚಿನ ಗಮನವನ್ನು ಕನ್ನಡ ಜಾಗೃತಿಗೆ ಸಂಬಂಧಿಸಿದ ಕಾರ್ಯಗಳಿಗೆ ನೀಡಲಾಗಿದೆ.

ಈ ವಿಷಯಕ್ಕೆ ಸಂಬಂಧಿಸಿದಂತೆ ಕೆಲ ಲೇಖನಗಳು ಬಂದಿವೆಯಾದರೂ ಕನ್ನಡ ಕಾರ್ಯವನ್ನು ಕುರಿತು ಸಮಗ್ರ ಅಧ್ಯಯನವನ್ನು ಯಾರೊಬ್ಬರೂ ಮಾಡಿಲ್ಲ. 'ಕರ್ನಾಟಕದ ಮಠಗಳು ಮತ್ತು ಕನ್ನಡ ಸಾಹಿತ್ಯ' (ಡಾ. ಕೆ.ರವೀಂದ್ರನಾಥ), ಬೆಂಗಳೂರು ನಗರ ವೀರಶೈವ ಮಠಗಳ ಒಂದು ಸಾಂಸ್ಕೃತಿಕ ಅಧ್ಯಯನ (ಡಾ. ಬಿ.ಸಿ. ವೀರಪ್ಪ), ಕರ್ನಾಟಕದ ವೀರಶೈವ ಮಠಗಳು (ಚಂದ್ರಶೇಖರ ನಾಗಣಾಪೂರ). ಹೀಗೆ ಮಠಗಳ ಮತ್ತು ಅವುಗಳ ಕಾರ್ಯಗಳನ್ನು ಕುರಿತಾಗಿ ಅಧ್ಯಯನಗಳು ನಡೆದಿವೆ. ಆದರೆ ಒಂದು ಮಠವು ಮಾಡಿದ ಕನ್ನಡ ಕಾರ್ಯಗಳನ್ನು ಕುರಿತು ಈ ಗಡಿಪ್ರದೇಶದ ವ್ಯಾಪ್ತಿಯಲ್ಲಿ

ಹೆಚ್ಚಿನ ಅಧ್ಯಯನಗಳು ನಡೆದಿಲ್ಲ. ಆ ದಿಶೆಯಲ್ಲಿ ಇದೊಂದು ಗಮನಾರ್ಹವಾದ ಪ್ರಯತ್ನವಾಗಿದೆ.

ಪ್ರಸ್ತುತ ಸಂದರ್ಭದಲ್ಲಿ ಕನ್ನಡಕಾರ್ಯ ಮಾಡುತ್ತಿರುವ ಗಡಿಭಾಗದ ಮಠವನ್ನು ನಾಡಿಗೆ ಪರಿಚಯಿಸಿ, ಅದೇ ಮಾದರಿಯಲ್ಲಿ ಇನ್ನುಳಿದ ಮಠಗಳು ಕನ್ನಡ ಜಾಗೃತಿ ಕಾರ್ಯವನ್ನು ಕೈಗೊಳ್ಳುವಂತೆ ಪ್ರೇರೆಪಿಸುವುದು ಇಂದು ಅಗತ್ಯವಾಗಿದೆ. ಗಡಿಭಾಗದಲ್ಲಿ ಕನ್ನಡ ಭಾಷೆ, ಸಂಸ್ಕೃತಿ, ಸಾಹಿತ್ಯ, ಜನಾಂಗ ಸಂಕಷ್ಟದ ಸ್ಥಿತಿಯಲ್ಲಿದ್ದಾಗ ಹೊಸದಾದ ಕನ್ನಡಪರವಾದ ಅಲೆಯನ್ನು ಎಬ್ಬಿಸಿರುವ 'ಕನ್ನಡ ಮಠ'ದ ಕಾರ್ಯವನ್ನು ಪರಿಚಯಿಸುವ ಆಶಯ ಈ ಅಧ್ಯಯನದ ಹಿಂದಿದೆ.

ಅಧ್ಯಯನದ ಅನುಕೂಲಕ್ಕಾಗಿ ಪ್ರಬಂಧವನ್ನು ೬ ಅಧ್ಯಾಯಗಳಲ್ಲಿ ವಿಂಗಡಿಸಿಕೊಳ್ಳಲಾಗಿದೆ. ಅವುಗಳು ಇಂತಿವೆ :

೧. ಅಧ್ಯಯನದ ಸ್ವರೂಪ

೨. ಪ್ರವೇಶ ಮತ್ತು ಪರಿಚಯ

೩. ಅಲ್ಲಮಪ್ರಭು ಸ್ವಾಮಿಗಳು – ಕನ್ನಡ ಕಾರ್ಯ

೪. ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ – ಕನ್ನಡ ಕಾರ್ಯ

೫. ಗಡಿಗನ್ನಡಿಗರ ಬಳಗ – ಕನ್ನಡ ಕಾರ್ಯ

೬. ಅಧ್ಯಯನದ ಫಲಶೃತಿ

ಮೊದಲ ಅಧ್ಯಾಯದಲ್ಲಿ ಅಧ್ಯಯನದ ವಿಷಯ, ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪವನ್ನು ಕುರಿತು ವಿವೇಚಿಸಲಾಗಿದೆ. ಇದುವರೆಗೆ ಆದ ಅಧ್ಯಯನಗಳ ಸಂಕ್ಷಿಪ್ತ ಅವಲೋಕನವನ್ನು ಸಂಪ್ರಬಂಧದ ಅಧ್ಯಾಯಗಳ ವಿಭಜನೆ ಮತ್ತು ಅಧ್ಯಯನ ವಿಧಾನವನ್ನು ತಿಳಿಸಲಾಗಿದೆ.

೨ನೆಯ ಅಧ್ಯಾಯದಲ್ಲಿ ವೀರಶೈವ ಲಿಂಗಾಯತ ಮಠಗಳು ಮಾಡಿರುವ ಕನ್ನಡ ಕಾರ್ಯ, ಗಡಿಭಾಗದ ಕನ್ನಡದ ಸ್ಥಿತಿಗತಿ, ಚಿಂಚಣಿ ಗ್ರಾಮ ಮತ್ತು ಶ್ರೀಗಳ ಪರಂಪರೆಯನ್ನು ಸಂಕ್ಷಿಪ್ತವಾಗಿ ತಿಳಿಸಲು ಪ್ರಯತ್ನಸಲಾಗಿದೆ.

೩ನೆಯ ಅಧ್ಯಾಯದಲ್ಲಿ ಸಧ್ಯದ ಪೀಠಾಧಿಪತಿಗಳಾದ ಅಲ್ಲಮಪ್ರಭು ಸ್ವಾಮಿಗಳ ಜೀವನ ಪರಿಚಯ, ಮಾಡಿದ ಕನ್ನಡದ ಕಾರ್ಯ, ಆಚರಿಸಿದ ರಾಜ್ಯೋತ್ಸವಗಳು ಮುಂತಾದ ವಿಷಯಗಳನ್ನು ನಿಖರವಾಗಿ ವಿವರಿಸಲಾಗಿದೆ. ಸ್ವಾಮಿಗಳ ಹವ್ಯಾಸಗಳು, ಕಟ್ಟಿಕೊಂಡ ಕನ್ನಡ ಸಂಸ್ಥೆಗಳನ್ನು ಪರಿಚಯಿಸಲಾಗಿದೆ.

೪ನೆಯ ಅಧ್ಯಾಯದಲ್ಲಿ ಮಠದ ಸಾಮಾಜಿಕ ಅಂಗಸಂಸ್ಥೆಯಾದ ಶ್ರೀ ಅಲ್ಲಮಪ್ರಭು ಜನ ಕಲ್ಯಾಣ ಸಂಸ್ಥೆಯ ಸ್ಥಾಪನೆ, ಪ್ರೇರಣೆ ಹಾಗೂ ಧ್ಯೇಯೋದ್ದೇಶಗಳ ಕುರಿತು ಮಾಹಿತಿ ಒದಗಿಸಲಾಗಿದೆ. ಇದುವರೆಗೆ ಕನ್ನಡ

ಜಾಗೃತಿ ಪುಸ್ತಕ ಮಾಲೆಯಲ್ಲಿ ಪ್ರಕಟಗೊಂಡ ೨೩ ಕೃತಿಗಳನ್ನು ಪರಿಚಯಿಸುವ ಪ್ರಯತ್ನವಿದೆ.

೫ನೆಯ ಅಧ್ಯಾಯದಲ್ಲಿ ಮಠದ ಕನ್ನಡ ಸಂಘಟನೆಯಾದ ಗಡಿಕನ್ನಡಿಗರ ಬಳಗದ ಸ್ಥಾಪನೆ, ಹಿನ್ನೆಲೆ, ಧ್ಯೇಯೋದ್ದೇಶಗಳನ್ನು ಸಂಕ್ಷಿಪ್ತವಾಗಿ ತಿಳಿಸಲಾಗಿದೆ. ಹಮ್ಮಿಕೊಂಡ ವಿಶಿಷ್ಟ ರಾಜ್ಯೋತ್ಸವಗಳು, ಹೋರಾಟಗಳು, ವಿವಿಧ ಸ್ಪರ್ಧೆ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳ ಕುರಿತಾದ ಆಧಾರಸಹಿತ ವಿವರಣೆಗಳನ್ನು ಒದಗಿಸಲಾಗಿದೆ.

೬ನೆಯ ಅಧ್ಯಾಯದಲ್ಲಿ ಅಧ್ಯಯನದ ಒಟ್ಟು ಫಲಿತಗಳನ್ನು ಕುರಿತು ವಿವೇಚಿಸಲಾಗಿದೆ. ಅಧ್ಯಯನದ ಉದ್ದೇಶ ಈಡೇರಿದ ಬಗೆಗೆ ಸಂಕ್ಷಿಪ್ತವಾದ ವಿಚಾರಗಳನ್ನು ಪ್ರಸ್ತುತ ಪಡಿಸಲಾಗಿದೆ.

ಹೀಗೆ ಈ ಸಂಪ್ರಬಂಧ ೬ ಅಧ್ಯಾಯಗಳಲ್ಲಿ ಬಿಚ್ಚಿಕೊಂಡಿದೆ. ಅನುಬಂಧದಲ್ಲಿ ಕೆಲವು ಮಹತ್ವಪೂರ್ಣವಾದ ಹಾಗೂ ಸಂಪ್ರಬಂಧಕ್ಕೆ ಪೂರಕವಾದ ಮಾಹಿತಿಗಳನ್ನು ಒದಗಿಸಲಾಗಿದೆ.

ಒಟ್ಟಿನಲ್ಲಿ ಈ ಸಂಪ್ರಬಂಧವು ಚಿಂಚಣಿ ಅಲ್ಲಮಪ್ರಭು ಸಿದ್ಧಸಂಸ್ಥಾನಮಠದ ಕನ್ನಡ ಸಂಘ- ಸಂಸ್ಥೆಗಳನ್ನು, ಅಲ್ಲಮಪ್ರಭು ಸ್ವಾಮಿಗಳ ಕನ್ನಡಪರ ಕಾಳಜಿಯನ್ನು, ಗಡಿಭಾಗದ ಕನ್ನಡದ ಸ್ಥಿತಿ-ಗತಿಗಳನ್ನು ಪರಿಚಯಿಸುವ ಒಂದು ಪ್ರಯತ್ನವಾಗಿದೆ. ನಿರ್ದಿಷ್ಟ ವಿಷಯದ ಚೌಕಟ್ಟಿನೊಳಗೆ ವಿಷಯ ವಿವರಣೆ, ವಿಶ್ಲೇಷಣೆ ಮಾಡುವುದರ ಜೊತೆಗೆ ವ್ಯಾಖ್ಯಾನಿಸಲು ಪ್ರಯತ್ನಿಸಲಾಗಿದೆ. ಅಧ್ಯಯನದ ವ್ಯಾಪ್ತಿಯು ಚಿಂಚಣಿ ಮಠವು ಕನ್ನಡ ಜಾಗೃತಿಗಾಗಿ ಗಡಿಭಾಗದಲ್ಲಿ ಮಾಡಿರುವ ಮತ್ತು ಮಾಡುತ್ತಿರುವ ಕಾರ್ಯಗಳನ್ನು ಕುರಿತು ಪರಿಚಯಿಸುವುದಾಗಿದೆ.

ಈ ಸಂಪ್ರಬಂಧವನ್ನು ಕೆಲ ವಿಧಧ ಅಧ್ಯಯನಗಳಿಂದ ರಚಿಸಲಾಗಿದೆ. ಇದುವರೆಗೆ ಮಠದ ಬಗೆಗೆ ಬಂದಿರುವ ಪ್ರಕಟನೆಗಳನ್ನು ಗುರುತಿಸುವುದು. ಅವುಗಳಲ್ಲಿ ಮಠಗಳ ಕುರಿತಾಗಿ ಬಂದ ವಿಷಯಗಳನ್ನು ಗುರುತಿಸುವುದು. ಇದೇ ರೀತಿಯಾಗಿ ಇತರ ಮಠಗಳ ಕಾರ್ಯಗಳ ಬಗೆಗೆ ಅಧ್ಯಯನ ಕೈಗೊಂಡ ಸಂಶೋಧಕರ ಅಧ್ಯಯನವನ್ನು ಗುರುತಿಸುವುದು. ಚಿಂಚಣಿ ಶ್ರೀಗಳೊಂದಿಗೆ ಮತ್ತು ಸಂಬಂಧಪಟ್ಟ ಸಂಘ-ಸಂಸ್ಥೆಗಳೊಂದಿಗೆ ನಡೆಸಿದ ಸಂದರ್ಶನವನ್ನು ಲಕ್ಷಿಸಲಾಗಿದೆ. ಚಿಂಚಣಿ ಗ್ರಾಮ ಮತ್ತು ಕೆಲವು ಗಡಿಗ್ರಾಮಗಳ ಕ್ಷೇತ್ರ ಅಧ್ಯಯನ, ಮಠದ ಬಗೆಗಿನ ಸಾಹಿತಿ ವಿದ್ವಾಂಸರ ಅಭಿಪ್ರಾಯದ ಪತ್ರಗಳನ್ನು ಅನುಲಕ್ಷಿಸಲಾಗಿದೆ. ಈ ಎಲ್ಲ ವಿಧಾನಗಳ ಮೂಲಕ ಪ್ರಸ್ತುತ ಅಧ್ಯಯನವನ್ನು ಪೂರ್ಣಗೊಳಿಸಲು ಯತ್ನಿಸಲಾಗಿದೆ.

ಅಧ್ಯಾಯ ೨.

# ಪ್ರವೇಶ ಮತ್ತು ಪರಿಚಯ

**ವೀರಶೈವ ಲಿಂಗಾಯತ ಮಠಗಳ ಸಾಹಿತ್ಯ ಸೇವೆ:**

೧೨ನೇ ಶತಮಾನದ ಸರಳ, ಸಮಾನ ಹಾಗೂ ಮಾನವೀಯತೆಯನ್ನು ಸಾರುವ ವಚನ ಸಾಹಿತ್ಯಕ್ರಾಂತಿಯ ಪರಿಣಾಮವಾಗಿ ಸಮಾಜದಲ್ಲಿ ಒಂದು ಹೊಸ ಸಂಚಲನವೇ ಉಂಟಾಯಿತು. ಈ ಸಂಚಲನಕ್ಕೆ ಕಾರಣರು ಬಸವಾದಿ ಶರಣ-ಶರಣೆಯರು. ಸಮಸ್ತ ಸಮಾಜವು ಅವನತಿಯ ಹಾದಿಯನ್ನು ಹಿಡಿದಾಗ ಶರಣರು ಸಮಾಜದಲ್ಲಿ ಸಮಾನತೆಯನ್ನು ತರುವುದಕ್ಕಾಗಿ ಪ್ರಯತ್ನಿಸಿದರು. ಅದರ ಫಲವಾಗಿಯೇ ಕನ್ನಡದಲ್ಲಿ ವಚನಸಾಹಿತ್ಯ ಜನ್ಮತಳೆಯಿತು. ವಚನ ಮಾಧ್ಯಮದ ಮೂಲಕ ಆಡು ಭಾಷೆಯಾದ ಕನ್ನಡವನ್ನು ದೇವಭಾಷೆಯನ್ನಾಗಿಸಿದ ಕೀರ್ತಿ ಶಿವಶರಣರಿಗೆ ಸಲ್ಲುತ್ತದೆ. ವೀರಶೈವ ಸಾಹಿತ್ಯದ ಮೊದಲ ಬೆಳೆ ವಚನಸಾಹಿತ್ಯ. ಇಂತಹ ಬೆಳೆಯನ್ನು ಉಳಿಸಿ ಬೆಳೆಸಿಕೊಳ್ಳುವಲ್ಲಿ ವೀರಶೈವ ಮಠಗಳು ಗಮನಾರ್ಹವಾದ ಪಾತ್ರವನ್ನು ವಹಿಸಿವೆ. "ಮಠವೆಂದರೆ ಕೇವಲ ಒದು ಭವ್ಯ ಕಟ್ಟಡ ಮಾತ್ರವಲ್ಲ ಅದೊಂದು ಧಾರ್ಮಿಕ ಸೌಧವಾಗಿ ಸಮಸ್ತ ಸಮಾಜವೇ ಸಾಂಘಿಕವಾಗಿ ವಿಕಾಸಗೊಳ್ಳುವಂತೆ ಮಾಡುವ ಪೂಜಾಗೃಹ ಎನ್ನಬಹುದು. ಮಠಗಳು ಮಾನವ ಕುಲದ ನಂದಾದೀಪಗಳು. ಮಠಗಳಿಂದಲೇ ಭಾರತದ ಸಂಸ್ಕೃತಿ ಉಳಿದಿರುವುದು"[೧] ಎಂದು ಡಾ.ಬಾಬು ರಾಜೇಂದ್ರ ಪ್ರಸಾದ ಅವರು ಹುಬ್ಬಳಿಯ ಮೂರುಸಾವಿರ ಮಠಕ್ಕೆ ಭೆಟ್ಟಿ ನೀಡಿದಾಗ ಹೇಳಿದ ಮಾತುಗಳಿವು. ಮಠಗಳೆಂದರೆ ಕೇವಲ ಧಾರ್ಮಿಕ ಕೇಂದ್ರಗಳಲ್ಲ. ಅವು ಒಂದು ನಾಡಿನ ಕಲೆ, ಸಾಹಿತ್ಯ, ಸಂಸ್ಕೃತಿಯನ್ನು ಸಂರಕ್ಷಿಸುವ ತಾಣಗಳು. ತಲೆಮಾರಿನಿಂದ ತಲೆಮಾರಿಗೆ ನಿರಂತರವಾಗಿ ಸಂಸ್ಕೃತಿಯನ್ನು ಮುಂದು ವರೆಸಿಕೊಂಡು ಹೋಗುವ ರಾಯಭಾರಿಗಳೆಂಬುದನ್ನು ಪ್ರತಿಪಾದಿಸುತ್ತದೆ.

"ಮೂಲತಃ ಧಾರ್ಮಿಕ ವಿಧಿವಿಧಾನಗಳನ್ನು ಆಚರಿಸುವ ಧಾರ್ಮಿಕ ಕೇಂದ್ರಗಳಾಗಿದ್ದ ಮಠಗಳು ನಂತರದ ದಿನಮಾನಗಳಲ್ಲಿ ಸಾಮಾಜಿಕ, ಸಾಹಿತ್ಯಿಕ, ಸಾಂಸ್ಕೃತಿಕ ಕೇಂದ್ರಗಳಾಗಿ ಸಮಸ್ತ ಜೀವನದ ಒಳಿತಿಗಾಗಿ ದುಡಿಯುತ್ತ ಬಂದಿವೆ. ಅವುಗಳ ಕರ್ತವ್ಯ ಧಾರ್ಮಿಕ ವಲಯವನ್ನು ದಾಟಿ ಸಾಮಾಜಿಕ ವಲಯವನ್ನು ವ್ಯಾಪಿಸಿಕೊಂಡಿತು"[೨]. ಈ ನಿಟ್ಟಿನಲ್ಲಿ ಮಠಮಾನ್ಯಗಳು ತಮ್ಮ ದೃಷ್ಟಿಯನ್ನು ಕ್ರಮೇಣವಾಗಿ ಸಾಹಿತ್ಯಿಕ ಚಟುವಟಿಕೆಗಳ ಕಡೆಗೆ ಹರಿಸಲು ಪ್ರಾರಂಭಿಸಿದವು. ೧೯ನೇ ಶತಮಾನದಿಂದ ಕನ್ನಡ ನಾಡಿನಲ್ಲಿ ಅನೇಕ ಮಠಗಳು ಶಿಕ್ಷಣ, ಸಾಹಿತ್ಯ, ಧರ್ಮ ಪ್ರಸಾರ ಕಾರ್ಯದಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಿವೆ.

ಸಾಹಿತ್ಯಿಕವಾಗಿ ಸೇವೆ ಗೈಯ್ಯುತ್ತಿರುವ ಮಠಗಳು ಅಂತರಂಗ ಬಹಿರಂಗ ಪರಿಸರಗಳಿಗೆ ಒಗ್ಗಿಕೊಂಡು ಕೆಲಸಮಾಡುತ್ತಿವೆ. "ಆಧುನಿಕವಾಗಿ ನೂರಾರು ಪದವಿ, ಪ್ರಶಸ್ತಿ ಸಮಾರಂಭಗಳ ಮೂಲಕ ಸಾಮಾಜಿಕ ಏಳಿಗೆಗಾಗಿ ದುಡಿದ ಮಹನೀಯರನ್ನು, ರೈತರನ್ನು, ವಿದ್ವಾಂಸರನ್ನು ರಾಜಕಾರಣಿಗಳನ್ನು, ಸಂಗೀತಗಾರರನ್ನು ಸನ್ಮಾನಿಸಿ ಗೌರವಿಸುವಲ್ಲಿ ಅವರಿಗೆ ಪ್ರೋತ್ಸಾಹ ನೀಡಿದರು"[೩] ಇದು ಒಂದು ಬಗೆಯ ಸಮಾಜದ ಕಾರ್ಯವೇ ಆಗಿದೆ.

ಪ್ರಸ್ತುತ ಕಾಲದಲ್ಲಿ ಹಲವಾರು ವೀರಶೈವ ಲಿಂಗಾಯತ ಮಠಗಳು ಕನ್ನಡಪರ ಕಾರ್ಯಗಳನ್ನು ಮಾಡುತ್ತ ಕನ್ನಡ ಮಠಗಳಾಗಿ ರೂಪುಗೊಳ್ಳುತ್ತಿರುವುದು ಆರೋಗ್ಯಕರ ಬೆಳವಣಿಗೆ ಎನಿಸಿದೆ.

ಸಿದ್ಧಗಂಗೆ ವಿರಕ್ತಮಠವು ವಚನಸಾಹಿತ್ಯ ಮತ್ತು ಶಿವಶರಣರನ್ನು ಕುರಿತಾಗಿ ಹಲವಾರು ಮಹತ್ವದ ಕೃತಿಗಳನ್ನು ಪ್ರಕಟಗೊಳಿಸುವ ಮೂಲಕ ಹಿಂದಿನಿಂದಲೂ ಒಳ್ಳೆಯ ಕಾರ್ಯಗಳನ್ನು ಮಾಡುತ್ತ ಬಂದಿದೆ. ಆಧುನಿಕ ಕಾಲದಲ್ಲಿ ಹೆಸರಿಸಲೇ ಬೇಕಾದ ಮಠ, ಗದುಗಿನ ತೋಂಟದಾರ್ಯ ಮಠ. ಶೂನ್ಯಸಿಂಹಾಸನದ ಮೊದಲ ಪೀಠಾಧಿಪತಿ ಅಲ್ಲಮನ ಸಂಪ್ರದಾಯದ ಎಡೆಯೂರು ತೋಂಟದ ಸಿದ್ಧಲಿಂಗಯತಿಗಳು ೧೫ನೇ ಶತಮಾನದ ದ್ವಿತಿಯ ಅಲ್ಲಮರು. ಜ.ಡಾ. ತೋಂಟದ ಸಿದ್ಧಲಿಂಗ ಸ್ವಾಮಿಗಳು ಈ ಪರಂಪರೆಯ ಸದ್ಯದ ೧೯ನೇ ಪೀಠಾಧಿಪತಿಗಳು. ಮಠದ ೧೯ನೇ ಪೀಠಾಧಿಪತಿಗಳಾಗಿ ಅಧಿಕಾರವನ್ನು ವಹಿಸಿಕೊಂಡು ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಕಾರ್ಯಗಳಿಗೆ ತೊಡಗಿಸಿಕೊಂಡಿದ್ದಾರೆ. ಡಾ.ಎಂ.ಎಂ. ಕಲಬುರ್ಗಿ ಅವರ ನೇತೃತ್ವದಲ್ಲಿ 'ಲಿಂಗಾಯತ ಅಧ್ಯಯನ ಸಂಸ್ಥೆ'ಯನ್ನು ಪ್ರಾರಂಭಿಸಿ ವೀರಶೈವ ಪುರಾತನ, ನೂತನ, ಅನುವಾದ, ಪುಣ್ಯಪುರುಷ, ಪಿ.ಎಚ್.ಡಿ., ಅಭಿನಂದನ, ಸಮಗ್ರ ವೀರಶೈವ, ಅಪ್ರಕಟಿತ ಸಾಹಿತ್ಯ ಪ್ರಕಟನಾ ಮಾಲೆಗಳಿಂದ ಹಲವಾರು ಕೃತಿಗಳನ್ನು ಬೆಳಕಿಗೆ ತಂದಿದ್ದಾರೆ. "ಶ್ರೀಮಠವು ಲಿಂಗಾಯತ ಅಧ್ಯಯನ ಸಂಸ್ಥೆಯಡಿಯಲ್ಲಿ ಪಿ.ಎಚ್.ಡಿ. ಪ್ರಬಂಧಗಳು, ವಚನ ಸಾಹಿತ್ಯ, ಸ್ವರ ವಚನ ಸಾಹಿತ್ಯ, ಪ್ರಾಚೀನ ಸಾಹಿತ್ಯ, ಆಧುನಿಕ ಸಾಹಿತ್ಯ, ಅಭಿನಂದನಾ ಸಾಹಿತ್ಯ, ಅನುವಾದ ಸಾಹಿತ್ಯ, ವೀರಶೈವ ಪುಣ್ಯಪುರುಷ ಮಾಲೆಯ ಮೂಲಕ ಕನ್ನಡದಲ್ಲಿ ಮಹತ್ವದ ಪುಸ್ತಕಗಳನ್ನು ಪ್ರಕಟಿಸಿ ಒಂದು ವಿಕ್ರಮ ಸ್ಥಾಪಿಸಿದೆ. ಈ ಎಲ್ಲ ಪುಸ್ತಕಗಳ ಮೂಲಕ ಸಾವಿರಾರು ಪುಟಗಳ ಸಾಹಿತ್ಯವನ್ನು ಕನ್ನಡಿಗರಿಗೆ ಒದಗಿಸಿದ ಶ್ರೇಯಸ್ಸು ಲಿಂಗಾಯತ ಅಧ್ಯಯನ ಸಂಸ್ಥೆಯದು"[೪]. ಜ.ಡಾ. ತೋಂಟದ ಸಿದ್ಧಲಿಂಗ ಸ್ವಾಮಿಗಳು ಶ್ರೀಮಠದ ಮುಖೇನ ನಾಡುನುಡಿಗೆ ಬಹುದೊಡ್ಡ ಆಸ್ತಿಯಾಗಿದ್ದಾರೆ; ಶಕ್ತಿಯಾಗಿದ್ದಾರೆ.

ಗದುಗಿನ ವೀರಶೈವ ಪುಣ್ಯಾಶ್ರಮವು ಅಂಧರ ಕಲ್ಯಾಣ, ಸಂಗೀತ, ನಾಟಕ ಹಾಗೂ ಪುರಾಣ ಕ್ಷೇತ್ರದಲ್ಲಿ ತನ್ನದೇ ಆದ ಕಾರ್ಯಗೈದು ನಾಡಿಗೆ ನೆರವಾಗಿದೆ.

ಸೊಂಡೂರಿನ ಶ್ರೀ ಪ್ರಭುದೇವರ ವಿರಕ್ತಮಠವು ಅಲ್ಲಮ ಸಂಪ್ರದಾಯದ ಪೀಠವಾಗಿದೆ. ಪ್ರಭುದೇವ ಜನಕಲ್ಯಾಣ ಸಂಸ್ಥೆಯನ್ನು ಕಟ್ಟಿ ಅದರ ಮೂಲಕ 'ಸಾಹಿತ್ಯ ಸಂಸ್ಕೃತಿ ಚಿಂತನಮಾಲೆ'ಯಲ್ಲಿ ಹಲವಾರು ಐತಿಹಾಸಿಕ ಸಾಹಿತ್ಯ ಕೃತಿಗಳನ್ನು ಪ್ರಕಟಿಸಿದೆ. ಹುಬ್ಬಳ್ಳಿಯ ಮೂರುಸಾವಿರ ಮಠವು 'ಗ್ರಂಥ ಪ್ರಕಟನಾ' ಕಾರ್ಯದಲ್ಲಿ ವಿಭಿನ್ನ ರೀತಿಯ ಕೃತಿಗಳನ್ನು ಹೊರತಂದಿದೆ. ಧಾರವಾಡದ ಮುರುಘಾಮಠ 'ಶ್ರೀಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ'ಯಡಿಯಲ್ಲಿ ಕನ್ನಡ ಸಾಹಿತ್ಯದ ವಿವಿಧ ಪ್ರಕಾರದ ಕೃತಿಗಳನ್ನು ಪ್ರಕಟಿಸಿದೆ. ಮುಂಡರಗಿಯ ಅನ್ನದಾನೀಶ್ವರ ಮಠದ ಶ್ರೀಗಳು ಸ್ವತಃ ಕೃತಿ ರಚಿಸುವುದಲ್ಲದೆ ಉಪನ್ಯಾಸ ಮಾಲಿಕೆ, ವಚನ ಸಾಹಿತ್ಯ ಮಾಲಿಕೆಗಳ ಮೂಲಕ ಸಾಹಿತ್ಯ ಸೇವೆ ಗೈದಿದ್ದಾರೆ. 'ಶ್ರೀ ಜಗದ್ಗುರು ಅನ್ನದಾನೇಶ್ವರ ಗ್ರಂಥಮಾಲೆ'ಯಡಿಯಲ್ಲಿ ನೂರಕ್ಕೂ ಮಿಕ್ಕ ಕೃತಿಗಳನ್ನು ಬೆಳಕಿಗೆ ತಂದಿದ್ದಾರೆ.

ಗಡಿಭಾಗದ ಬೆಳಗಾವಿಯ ನಾಗನೂರು ರುದ್ರಾಕ್ಷಿ ಮಠ 'ಲಿಂಗಾಯತ ಅಧ್ಯಯನ ಅಕ್ಯಾಡಮಿ' ಮೂಲಕ ನಿರಂತರ ಸಾಹಿತ್ಯ ಕೃತಿಗಳನ್ನು ಪ್ರಕಟಿಸುವದರೊಂದಿಗೆ ನಾಡು-ನುಡಿಪರ ಹೋರಾಟದಲ್ಲಿ ಮುಂಚೂಣಿಯಲ್ಲಿದೆ. 'ಲಿಂಗಾಯತ ಕೇಂದ್ರ ಸಂಶೋಧನಾ ಗ್ರಂಥಾಲಯ'ವೆಂಬ ಹೆಸರಿನಲ್ಲಿ ಲಿಂಗಾಯತ ಸಾಹಿತ್ಯ ಸಂಸ್ಕೃತಿಗೆ ಸಂಬಂಧಿಸಿದ ಎಲ್ಲ ಪತ್ರಿಕೆ ಮತ್ತು ಸಾಹಿತ್ಯವನ್ನು ಒಂದೆಡೆಗೆ ಸಂಗ್ರಹಿಸಲಾಗಿದೆ. ಇದು ದೇಶ ವಿದೇಶಗಳ ವಿದ್ವಾಂಸರಿಗೆ ಅಧ್ಯಯನಕ್ಕೆ ಅನುಕೂಲತೆ ಒದಗಿಸಿದೆ. ಇದರೊಂದಿಗೆ 'ಲಿಂಗಾಯತ' ಎಂಬ ಪತ್ರಿಕೆಯನ್ನು ಪ್ರಕಟಿಸಲಾಗುತ್ತಿದ್ದು ಈ ಪತ್ರಿಕೆಯು ಉತ್ತಮ ಗುಣಮಟ್ಟದಿಂದ ಕೂಡಿದೆ.

ಹೊಸಪೇಟೆಯ ಕೊಟ್ಟೂರುಮಠ 'ಹರಿಹರ ಸಂಶೋಧನಾ ಕೇಂದ್ರ'ವನ್ನು ಸ್ಥಾಪಿಸಿ ಸಂಸ್ಕೃತಿ ಮತ್ತು ಸಾಹಿತ್ಯಪರವಾದ 'ಹೇಮಕೂಟ' ಮಾಸಪತ್ರಿಕೆಯನ್ನು ಕಳೆದ ೩೦ ವರ್ಷಗಳಿಂದ ಪ್ರಕಟಿಸುತ್ತಿದೆ. ಹಾನಗಲ್ಲ ಕುಮಾರಸ್ವಾಮಿಗಳಿಂದ ಸ್ಥಾಪಿತವಾದ ಶಿವಯೋಗಮಂದಿರ 'ಶಿವಾನುಭವ ಗ್ರಂಥಮಾಲೆ'ಯ ಮೂಲಕ ವಚನಸಾಹಿತ್ಯವನ್ನು ಪ್ರಕಟಿಸಿದೆ. ಇಳಕಲ್ಲ ಮಠ ಅಲ್ಲಮಪ್ರಭು ಸಂಪ್ರದಾಯದ ಮಠವಾಗಿದ್ದು 'ಶ್ರೀ ಚಿತ್ತರಗಿ ವಿಜಯಮಹಾಂತೇಶ್ವರ ಧರ್ಮ ಪ್ರಸಾರಕ ಮಂಡಲ'ದಿಂದ ನೂರಕ್ಕೂ ಹೆಚ್ಚು ಕೃತಿಗಳನ್ನು ಪ್ರಕಾಶಿಸಿದೆ. ಕಲಬುರ್ಗಿಯ ಶ್ರೀ ಶರಣ ಬಸವೇಶ್ವರ ಸಂಸ್ಥಾನ ಮಠ 'ಶ್ರೀ ಶರಣಬಸವೇಶ್ವರ ಗ್ರಂಥ ವಿಶ್ವವಿದ್ಯಾಲಯ'ದ ಅಡಿಯಲ್ಲಿ ಸಾಹಿತ್ಯಕೃತಿಗಳನ್ನು ಪ್ರಕಟಿಸಿದೆ. ಬಾಲ್ಕಿ ಹಿರೇಮಠ ಸಂಸ್ಥಾನವು ಗಡಿಭಾಗದ ಮಠವಾಗಿದ್ದು ಕನ್ನಡ ಕಲಿಸುವಲ್ಲಿ, ಉಳಿಸುವಲ್ಲಿ ಐತಿಹಾಸಿಕವಾಗಿ ಪ್ರಮುಖ ಪಾತ್ರವಹಿಸಿದೆ. ಹೈದ್ರಾಬಾದ ಕರ್ನಾಟಕದಲ್ಲಿ ಕನ್ನಡ ದುಸ್ಥಿತಿಯಲ್ಲಿದ್ದಾಗ ಹೊರಗೆ ಉರ್ದು ನಾಮಫಲಕ ಹಾಕಿ ಒಳಗೆ ಕನ್ನಡ ಕಲಿಸಿದ ಶ್ರೇಯಸ್ಸು ಲಿಂ.ಚನ್ನಬಸವ ಪಟ್ಟದ್ದೇವರು ಇವರಿಗೆ ಸಲ್ಲುತ್ತದೆ. 'ಚೆನ್ನಬಸವೇಶ್ವರ ವೀರಶೈವ ಗ್ರಂಥಾಲಯ'ವನ್ನು ಸ್ಥಾಪನೆಮಾಡಿ ಸಮಗ್ರ ವೀರಶೈವ

ಸಾಹಿತ್ಯ ಸಂಗ್ರಹಿಸಿ ಸಂಶೋಧನೆಗೆ ಪೂರಕವಾಗುವಂತೆ ಮಾಡಿದೆ. ಚಿತ್ರದುರ್ಗದ ಬೃಹನ್ಮಠವು ಪ್ರಾಚೀನ ಕಾಲದಿಂದಲೂ ಸಾಹಿತ್ಯ ಸೇವೆಯಲ್ಲಿ ತೊಡಗಿದೆ. 'ವೀರಶೈವ ಸಂಶೋಧನಾ ಸಂಸ್ಥೆ'ಯ ಮೂಲಕ ಸಮಗ್ರ ಮಾಹಿತಿಯನ್ನು ನೀಡುವ ಕೃತಿಗಳನ್ನು ಸಂಗ್ರಹಿಸಿದೆ. ಸಿದ್ಧಗಂಗಾಮಠ ಮೌಲ್ಯಯುತ ಗ್ರಂಥಗಳನ್ನು ಸಂಗ್ರಹಿಸಿ ಸಂಶೋಧಕರಿಗೆ ಸಹಾಯಮಾಡಿದೆ. ಸಿರಿಗೆರೆ ಬೃಹನ್ಮಠ 'ಶ್ರೀ ತರಳಬಾಳು' ಪತ್ರಿಕೆಯನ್ನು ಹೊರತರುತ್ತಿದೆ. ಸಾಣೆಹಳ್ಳಿ ಸಂಚಾರಿ ನಾಟಕ ತಂಡವನ್ನು ಕಟ್ಟಿಕೊಂಡು ರಂಗಸೇವೆಗೈಯ್ಯುತ್ತಿದೆ.

ಶಿವಮೊಗ್ಗಾ ಜಿಲ್ಲೆಯ ಆನಂದಪುರದ ಮುರುಘರಾಜೇಂದ್ರ ಸಂಸ್ಥಾನಮಠವು 'ಮಲೆನಾಡಿನ ವೀರಶೈವ ಅಧ್ಯಯನ ಸಂಸ್ಥೆ'ಯನ್ನು ಸ್ಥಾಪಿಸಿ ಹಲವಾರು ಸಾಹಿತ್ಯಿಕ ಕಾರ್ಯಕ್ರಮ ಮತ್ತು ಯೋಜನೆಗಳನ್ನು ಕೈಗೊಳ್ಳುತ್ತಿದೆ. ಬೆಂಗಳೂರಿನ ಸರ್ಪಭೂಷನ ಮಠವು 'ಶರಣ ಸಾಹಿತ್ಯ ಪ್ರಕಟನಾ ಯೋಜನೆ'ಗಳ ಮೂಲಕ ಸಾಹಿತ್ಯವನ್ನು ಬೆಳಕಿಗೆ ತರುತ್ತಿದೆ. ಸುತ್ತೂರು ಸಂಸ್ಥಾನಮಠವು 'ಜೆ.ಎಸ್.ಎಸ್. ಗ್ರಂಥಮಾಲೆ'ಯನ್ನು ತೆರೆದು ೧೦೦ಕ್ಕೂ ಅಧಿಕ ಕೃತಿಗಳನ್ನು ಪ್ರಕಾಶಿಸಿದೆ. ನಿಡುಮಾಮಿಡಿ ಸಂಸ್ಥಾನಮಠವು 'ಮಾಮಿಡಿ' ಎಂಬ ತ್ರೈಮಾಸಿಕ ಪತ್ರಿಕೆಯನ್ನು ಹೊರತರುತ್ತಿದೆ. ಮತ್ತು ಹಲವು ಮೌಲಿಕ ಕೃತಿಗಳನ್ನು ಪ್ರಕಟಿಸಿ ಸಾಹಿತ್ಯ ಸೇವೆಯನ್ನು ಮಾಡುತ್ತಿದೆ. ಚೌಡಾಪುರ ಹಿರೇಮಠವು ಪುರಾಣ, ನಾಟಕ, ಚರಿತ್ರೆ, ವಚನ ಗ್ರಂಥಗಳನ್ನು ಪ್ರಕಾಶಿಸಿದೆ. ರಂಭಾಪುರಿ ಪೀಠವು 'ಶ್ರೀಮದ್ವೀರಶೈವ ಸದ್ಬೋಧನಾ ಸಂಸ್ಥೆ' ಎಂಬ ಪ್ರಸಾರಾಂಗದಲ್ಲಿ ಅನೇಕ ವೀರಶೈವ ಧರ್ಮ ಸಂಬಂಧಿ ಗ್ರಂಥಗಳನ್ನು ಕಲೆಹಾಕಿದೆ.

ನಿಡಸೋಸಿಯ ಸಿದ್ಧಸಂಸ್ಥಾನ ಮಠವು 'ಶ್ರೀ ನಿಜಲಿಂಗೇಶ್ವರ ಗ್ರಂಥಮಾಲೆ', 'ಶರಣ ಸಂಸ್ಕೃತಿಯ ಅಧ್ಯಯನ ಕೇಂದ್ರ'ದ ಮೂಲಕ ಹಲವಾರು ಕೃತಿಗಳನ್ನು ಪ್ರಕಟಿಸಿದೆ ಮತ್ತು ಗಡಿನಾಡು ಶರಣ ಸಂಸ್ಕೃತಿ ಅಧ್ಯಯನ ಕೇಂದ್ರದ ಮೂಲಕ ಸಾಹಿತ್ಯ ಹಾಗೂ ಸಂಸ್ಕೃತಿಯ ಪ್ರಸಾರ ಕಾರ್ಯದಲ್ಲಿ ತೊಡಗಿದೆ. ಮುಖ್ಯವಾಗಿ ಕನ್ನಡ ಭಾಷೆಯ ವಚನಗಳನ್ನು ಮರಾಠಿ ಭಾಷೆಗೆ ಅನುವಾದಿಸುವ ಯೋಜನೆಯನ್ನು ಹಾಕಿಕೊಂಡು, ಕೆಲವು ವಚನ ಸಂಕಲನಗಳನ್ನು ಮರಾಠಿ ಭಾಷೆಗೆ ಅನುವಾದಿಸಿ ಪ್ರಕಟಿಸಿದೆ. ಈ ಮೂಲಕ ಕನ್ನಡ ಸಂಸ್ಕೃತಿಯ ಪ್ರಮುಖವಾದ ವಿಚಾರಧಾರೆಗಳನ್ನು ಮರಾಠಿ ಭಾಷಿಕರಿಗೆ ಪರಿಚಯಿಸುವ ಪ್ರಯತ್ನ ಮಾಡಿದೆ.

ಯಲಬುರ್ಗಿ ಸಿದ್ಧರಾಮೇಶ್ವರ ಮಠ, ಅಥಣಿಯ ಮೋಟಗಿಮಠ ಇನ್ನೂ ಮುಂತಾದ ಮಠಗಳು ನಿರಂತರವಾಗಿ ಕನ್ನಡ ಸಂಸ್ಕೃತಿ ಹಾಗೂ ಸಾಹಿತ್ಯದ ಮೂಲಕ ಕನ್ನಡ ಜಾಗೃತಿಯನ್ನು ಮಾಡುತ್ತಿವೆ. ಚಿಂಚಣಿಯ ಸಿದ್ಧಸಂಸ್ಥಾನಮಠವು ಈ ಎಲ್ಲ ಮಠಗಳ ಕನ್ನಡಪರವಾದ ಆಶಯಗಳನ್ನು ಒಳಗೊಂಡು, ಈ ಎಲ್ಲ ಮಠಗಳಿಗಿಂತ ಭಿನ್ನವಾಗಿ ಗಡಿಭಾಗದಲ್ಲಿ ಕನ್ನಡ ನಾಡು-ನುಡಿಪರ ಕಾರ್ಯಗಳನ್ನು ಹಮ್ಮಿಕೊಳ್ಳುವ

ಮೂಲಕ ಕನ್ನಡ ಜಾಗೃತಿಯನ್ನು ಸದ್ದಿಲ್ಲದೆ ಮಾಡುತ್ತ ಮುನ್ನಡೆದಿದೆ. ಇಂದು ಗಡಿಭಾಗದಲ್ಲಿ ಕನ್ನಡದ ವಾತಾವರಣ ನಿರ್ಮಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತಿದೆ.

**ಚಿಕ್ಕೋಡಿ ಗಡಿಕನ್ನಡದ ಸ್ಥಿತಿ-ಗತಿ:**

ಗಡಿಭಾಗದ ಕನ್ನಡಿಗರು ಸದಾಕಾಲವೂ ದ್ವಂದ್ವಮನಸ್ಸಿನಿಂದ ಬಳಲುತ್ತಿದ್ದಾರೆ. ಪರಭಾಷೆ, ಪರಸಂಸ್ಕೃತಿಯ ಆಕ್ರಮಣದಿಂದಾಗಿ ಅವರು ನೀಡುವ ಆಮಿಷಗಳಿಗೆ ಒಳಗಾಗಿ ತಾಯ್ನುಡಿ ಮತ್ತು ತಾಯ್ನೆಲವನ್ನು ಮರೆತು ಬದುಕುತ್ತಿದ್ದಾರೆ. ಇದಕ್ಕೆ ಸರಕಾರದ ನಿರ್ಲಕ್ಷ್ಯ ಮತ್ತು ಕನ್ನಡಿಗರಲ್ಲಿರುವ ಆತ್ಮಸ್ಥೈರ್ಯದ ಕೊರತೆಯೇ ಕಾರಣ.

ಕ್ರಿ.ಶ. ೯ ನೇ ಶತಮಾನದ ಕವಿರಾಜಮಾರ್ಗಕಾರ ಕಾವೇರಿಯಿಂದ ಗೋದಾವರಿವರೆಗೆ ಕನ್ನಡನಾಡು ಪಸರಿಸಿತ್ತು ಎಂಬುದನ್ನು ತಿಳಿಸಿದ್ದಾನೆ. ಮಹಾರಾಷ್ಟ್ರದಲ್ಲಿ ದೊರೆಯುವ ಶಿಲಾಶಾಸನಗಳಲ್ಲಿ ಮುಕ್ಕಾಲುಭಾಗ ಕನ್ನಡ ಶಾಸನಗಳೇ ಇವೆ. ಅಲ್ಲಿರುವ ಊರಿನ ಹೆಸರುಗಳು (ಬೀಡ, ಕಾನಡಾ, ಊರು, ಹಟ್ಟಿ, ವಾಡ), ದೇವರುಗಳು (ವಿಠ್ಠಲ, ಖಂಡೋಬಾ, ಮಾಳಸಿ, ತುಳಜಾಬಾಯಿ) ಬಳಕೆಯಲ್ಲಿರುವ ಅಡ್ಡ ಹೆಸರುಗಳು (ಧನಗರ, ಕಾನಡಾ) ಎಲ್ಲವೂ ಕನ್ನಡದವುಗಳೇ ಆಗಿವೆ. ಹಾಗೆ ನೋಡಿದರೆ ಒಂದು ಕಾಲದಲ್ಲಿ ಮಹಾರಾಷ್ಟ್ರವು ಕರ್ನಾಟಕವೇ ಆಗಿತ್ತೆಂಬುದು ದಾಖಲೆಗಳಿಂದ ತಿಳಿದುಬರುತ್ತದೆ. ಈ ವಿಷಯವನ್ನು ಶಂಬಾ ಜೋಶಿಯವರು ಹಾಗೂ ಎಂ.ಎಂ.ಕಲಬುರ್ಗಿಯವರು ಬಲವಾಗಿ ಪ್ರತಿಪಾದಿಸಿದ್ದಾರೆ. "ವಿಜಯನಗರ ಸಾಮ್ರಾಜ್ಯದ ಅವನತಿಯ ನಂತರ ಕನ್ನಡ ಭೂಪ್ರದೇಶಗಳು ಹಲವು ಆಡಳಿತ ಘಟಕಗಳಲ್ಲಿ ಹಂಚಿಹೋದವು. ಇಲ್ಲಿ ಆಳ್ವಿಕೆಮಾಡುತ್ತಿದ್ದ ಪ್ರಭುಗಳು ಕನ್ನಡಕ್ಕೆ ಪೋಷಕವಾಗಿ ನಿಂತರು. ಆದರೆ ಆದಿಲ್‌ಶಾಹಿ ಮತ್ತು ಬಹುಮನಿ ಸುಲ್ತಾನರ ಆಳ್ವಿಕೆಯ ಪ್ರಭಾವದಿಂದಾಗಿ ಇಂದಿನ ಉತ್ತರ ಕರ್ನಾಟಕ ಹಾಗೂ ಸೊಲ್ಲಾಪೂರ, ಕೊಲ್ಹಾಪೂರ, ಸಾಂಗ್ಲಿ ಭಾಗಗಳಲ್ಲಿ ಮರಾಠಿಗರು ಪ್ರಬಲರಾದರು. ಇಲ್ಲಿ ಉರ್ದು ಮತ್ತು ಮರಾಠಿ ಭಾಷೆಗಳು ಹೆಚ್ಚು ಪ್ರಚಲಿತಗೊಂಡು ಇವುಗಳ ಮಧ್ಯೆ ಉಸಿರಾಡಬೇಕಾದ ಸ್ಥಿತಿ ಕನ್ನಡಕ್ಕೆ ಒದಗಿತು"[೫]. ಅಂದರೆ ಉತ್ತರ ಕರ್ನಾಟಕವು ವಿಜಯನಗರ ಸಾಮ್ರಾಜ್ಯದ ಅವನತಿಯ ನಂತರ ಇಸ್ಲಾಮಿ ಮತ್ತು ಮರಾಠಿಗರ ಆಕ್ರಮಣಕ್ಕೆ ಒಳಗಾಗಿ ತನ್ನ ತನವನ್ನು ಕಳೆದುಕೊಂಡಿತು. ಕ್ರಮೇಣ ಆಳರಸರ ಭಾಷೆಯು ಜನಸಾಮಾನ್ಯರ ಭಾಷೆಯಾಗಿ ನೆಲೆನಿಂತಿತು. ಇಸ್ಲಾಮಿಯರ ಮತ್ತು ಮರಾಠರ ಆಡಳಿತ ಭಾಷೆಗಳ ನಡುವೆ ಕನ್ನಡವು ಅಸ್ತಿತ್ವ ಉಳಿಸಿಕೊಳ್ಳಲು ಹೋರಾಡಬೇಕಾಯಿತು.

"ಕ್ರಿ.ಶ. ೧೮೧೮ರ ವರೆಗೆ ಪೇಶ್ವೆಗಳ ಆಳ್ವಿಕೆಗೆ ಒಳಪಟ್ಟ ಈ ಪ್ರದೇಶದಲ್ಲಿ ಮರಾಠಿ ಪ್ರಾಬಲ್ಯವನ್ನು ಪಡೆದಿತ್ತು. ಅಲ್ಲದೆ ಬಂಗಾಳಿ, ಗುಜರಾತಿ ಮೊದಲಾದ

ಭಾಷೆಗಳು ಕೂಡಾ ಕನ್ನಡದ ಅನನ್ಯತೆಗೆ ಧಕ್ಕೆ ತರುತ್ತಿದ್ದವು. ಸಾರ್ವಜನಿಕವಾಗಿ ಮರಾಠಿ ವ್ಯವಹಾರಿಕ ಭಾಷೆಯಾಗಿತ್ತು"[೬] ಇಂತಹ ಸಂದಿಗ್ಧತೆಯ ನಡುವೆ ಸಿಕ್ಕು ನರಳುತ್ತಿರುವ ಕನ್ನಡಿಗರಲ್ಲಿ ಸಹಜವಾಗಿಯೇ ಕರ್ನಾಟಕದ ಕಲ್ಪನೆ ಮೂಡಲಾರಂಭಿಸಿತು. ಬೇರೆ ಬೇರೆ ಭಾಷೆಗಳ ಆಕ್ರಮಣದಿಂದಾಗಿ ಕನ್ನಡಿಗರು ಬೇಸತ್ತಿದ್ದರು. ಇದೆ ರೀತಿ ಮುಂದುವರೆದು ಕನ್ನಡತನಕ್ಕೆ ಧಕ್ಕೆ ಉಂಟಾಗುತ್ತಿತ್ತು. ಇಂತಹ ಸಂಧರ್ಬದಲ್ಲಿ "ವಸಾಹತು ಕಾಲದ ಕರ್ನಾಟಕ ಕಲ್ಪನೆಗೆ ಮೂಲ ಪ್ರೇರಕರಾಗಿ ನಿಂತವರು ಮುಂಬಯಿ ಕರ್ನಾಟಕದ ಕನ್ನಡಿಗರು. ಇದು ಅವರ ಸಾಂದರ್ಭಿಕ ಅನಿವಾರ್ಯವೂ ಆಗಿತ್ತು"[೭] ಈ ಭಾಗವನ್ನು ಆಳ್ವಿಕೆ ಮಾಡುತ್ತಿರುವ ಬ್ರಿಟೀಷ್ ಆಳರಸರು ಕೂಡಾ ಮರಾಠಿಯನ್ನೇ ಈ ನಾಡಿನ ಆಡಳಿತ ಭಾಷೆಯನ್ನಾಗಿ ಭ್ರಮಿಸಿಕೊಂಡಿದ್ದರು. ಸುಶಿಕ್ಷಿತರಲ್ಲಿ ಮರಾಠಿ ಬರೆಯುವುದು ಮತ್ತು ಮಾತನಾಡುವುದು ಒಂದು ರೀತಿಯ ಗೌರವದ ವಿಷಯವಾಗಿತ್ತು. ಇದಕ್ಕೆ ಕಾರಣ ಆ ಸಂದರ್ಭದಲ್ಲಿ ಕನ್ನಡ ಮಾತನಾಡುವ ಜನರನ್ನು ಬಹಳ ಹೀನಾಯವಾಗಿ ನೋಡಿಕೊಳ್ಳಲಾಗುತ್ತಿತ್ತು. ಅತಿಯಾಗಿ ಅವಮಾನಿಸಲಾಗುತ್ತಿತ್ತು.

೧೯೫೬ರ ವರೆಗೆ ಅಂದರೆ, ಕರ್ನಾಟಕ ಒಗ್ಗೂಡುವವರೆಗೆ ಮರಾಠಿಯ ಪ್ರಭಾವ ಈ ಭಾಗದಲ್ಲಿ ಬಲವತ್ತರವಾಗಿತ್ತು. ಬ್ರಿಟೀಷ್ ಆಡಳಿತದಲ್ಲಿ ಒಂದಿಷ್ಟು ಕನ್ನಡ ಭಾಷೆ ಆಗಾಗ ನಿರಾತಂಕವಾಗಿ ಉಸಿರಾಡಿತ್ತಾದರೂ ೧೯ನೆಯ ಶತಮಾನದಲ್ಲಿಯ ಮರಾಠಿಯರ ಪುನರುತ್ಥಾನ ಹಾಗೂ ರಾಷ್ಟ್ರೀಯ ಚಳುವಳಿಯ ಪ್ರಭಾವದಿಂದ ಈ ಭಾಗವೆಲ್ಲಾ ತಾತ್ಪೂರ್ತಿಕವಾಗಿ ದಕ್ಷಿಣ ಮಹಾರಾಷ್ಟ್ರವೇ ಆಗಿಬಿಟ್ಟಿತ್ತು.

ಬ್ರಿಟೀಷರು ದೇಶವನ್ನು ಆಕ್ರಮಿಸುತ್ತಾ ಬಂದಂತೆ ಆಡಳಿತದ ಅನುಕೂಲಕ್ಕಾಗಿ ಹಲವು ಭಾಗಗಳನ್ನು ಮಾಡಿದರು. ಈ ರೀತಿ ವಿಭಾಗಿಸುವಾಗ ಭಾಷೆ, ಸಾಹಿತ್ಯ, ಸಂಸ್ಕೃತಿ, ಜನಾಂಗ ಯಾವುದನ್ನೂ ಗಮನಿಸದೆ ಮನಬಂದಂತೆ ನಾಡನ್ನು ಒಡೆದರು. ಈ ಮೂಲಕ ಕನ್ನಡ ನಾಡು-ನುಡಿಯನ್ನು ಛಿದ್ರ-ವಿಛಿದ್ರಗೊಳಿಸಿದರು. ಇದರ ಪ್ರತಿಕೂಲತೆ ಹೆಚ್ಚಾಗಿ ಕನ್ನಡ ಭಾಷೆ ಮತ್ತು ಸಂಸ್ಕೃತಿಯ ಮೇಲೆ ಉಂಟಾಯಿತು.

"ಚಿಕ್ಕೋಡಿ ತಾಲೂಕಿಗೆ ತನ್ನದೇ ಆದ ವೈಶಿಷ್ಟ್ಯತೆ ಮತ್ತು ಇತಿಹಾಸವಿದೆ. ಬೆಳಗಾವಿ ಜಿಲ್ಲೆಯ ಒಂದು ಮುಖ್ಯ ಅಂಗ. ಒಂದು ಕಾಲಕ್ಕೆ ಪೇಶ್ವೆಯರ, ಮರಾಠರ ಆಡಳಿತಕ್ಕೊಳಗಾಗಿದ್ದ ಈ ಭಾಗದಲ್ಲಿ ಮರಾಠಿ ಭಾಷೆಯ ಪ್ರಭುತ್ವ ಬಹಳ ದಿನಗಳಿಂದ ಉಳಿದುಕೊಂಡು ಬಂದಿರುವುದನ್ನು ನಾವು ಇಂದಿಗೂ ಕಾಣುತ್ತೇವೆ. ಇದಕ್ಕೆ ಕಾರಣ ಆಳುವವರ ಭಾಷೆಯು ಜನರ ಭಾಷೆಯಾಗುವುದು ಸಹಜ"[೮].

ಕರ್ನಾಟಕ ಏಕೀಕರಣಗೊಂಡು ೫೦ ವರ್ಷಗಳು ಕಳೆದರೂ ಗಡಿಭಾಗದ ಅಭಿವೃದ್ಧಿಯಾಗದೆ ಹಾಗೇ ಉಳಿದಿದೆ. ರಾಜಕೀಯ ಧುರಿಣರು, ಚುನಾಯಿತ ಜನಪ್ರತಿನಿಧಿಗಳು ತಮ್ಮ ಮತದ ಬ್ಯಾಂಕನ್ನು ಭದ್ರಪಡಿಸಿಕೊಳ್ಳಲು ಮರಾಠಿಗರನ್ನು ಬೆಂಬಲಿಸಿ ಗಡಿಭಾಗದಲ್ಲಿ ಮರಾಠಿ ಶಾಲೆಗಳನ್ನು ಅಧಿಕ ಪ್ರಮಾಣದಲ್ಲಿ

ತೆರೆಯುತ್ತಿದ್ದಾರೆ. ಆದರೆ ಮಹಾರಾಷ್ಟ್ರ ಸರ್ಕಾರವು ಗಡಿಭಾಗದ ಕನ್ನಡ ಶಾಲೆಗಳನ್ನು ಸಂಪೂರ್ಣವಾಗಿ ಮುಚ್ಚಿಹಾಕುತ್ತಿದೆ. ಅನೇಕ ಕನ್ನಡ ಪ್ರದೇಶಗಳು ಇಂದಿಗೂ ಮಹಾರಾಷ್ಟ್ರದಲ್ಲಿ ಉಳಿದುಕೊಂಡಿವೆ. ಕನ್ನಡ ಭಾಷೆಯ, ಕನ್ನಡ ಶಿಕ್ಷಣದ ಸ್ಥಿತಿ-ಗತಿಯ ಬಗ್ಗೆ ಮಾತನಾಡಲು ಕನ್ನಡಿಗರಿಗೆ ಬಾಯಿಯೇ ಇಲ್ಲದಂತಾಗಿ ಅಸಹಾಯಕತೆಯಿಂದ ಬದುಕುತ್ತಿರುವುದನ್ನು ಕಾಣುತ್ತೇವೆ.

ಗಡಿಭಾಗದ ಶಿಕ್ಷಣ ಸಂಸ್ಥೆಗಳಲ್ಲಿ, ಸಾರ್ವಜನಿಕ ಗ್ರಂಥಾಲಯಗಳಲ್ಲಿ ಕನ್ನಡ ಗ್ರಂಥಗಳ ಕೊರತೆ ಎದ್ದುಕಾಣುತ್ತದೆ. ಕನ್ನಡದ ಪ್ರಸಿದ್ಧ ಲೇಖಕರ ಕೃತಿಗಳು ಕಾಣುವುದೇ ಇಲ್ಲ. ಕನ್ನಡ ಪತ್ರಿಕೆಗಳಂತೂ ಸಿಗುವುದು ದುರ್ಲಭವಾಗಿದೆ. ಆದರೆ ಕರ್ನಾಟಕದಲ್ಲಿ ಮರಾಠಿಪತ್ರಿಕೆಗಳು ಸಲೀಸಾಗಿ ದೊರೆಯುತ್ತವೆ. ಕನ್ನಡ ಪತ್ರಿಕೆಗಳಲ್ಲಿ ಗಡಿಭಾಗದ ಸುದ್ದಿಗೆ ಪ್ರಾಧಾನ್ಯತೆ ನೀಡದಿರುವುದು ಸಹ ಇದಕ್ಕೆ ಕಾರಣ. ಆದ್ದರಿಂದ ಇಂದಿನ ದಿನಗಳಲ್ಲಿ ಕನ್ನಡ ಪತ್ರಿಕೆಗಳು ಗಡಿಭಾಗದ ಸುದ್ಧಿಗೆ ಪ್ರಾಧಾನ್ಯತೆ ನೀಡುವುದು ಅಗತ್ಯವೆನಿಸಿದೆ.

ಮರಾಠಿ ನಾಟಕಗಳು, ತಮಾಶಾಗಳು ಜನರ ಮೇಲೆ ತೀವ್ರತರವಾದ ಪ್ರಭಾವಗಳನ್ನು ಬೀರುತ್ತಿವೆ. ಜಾತ್ರೆ, ಉತ್ಸವಗಳು, ನಾಮಫಲಕಗಳು ಎಲ್ಲವೂ ಮರಾಠಿಮಯ. ಇದ್ದ ಒಂದೆರಡು ಫಲಕಗಳೂ ಕೂಡ ಅಶುದ್ಧವಾಗಿರುತ್ತವೆ.

ಆರ್ಥಿಕವಾಗಿ ಗಡಿಪ್ರದೇಶಗಳು ಅಭಿವೃದ್ಧಿಯಿಂಧ ವಂಚಿತವಾಗಿವೆ. ಹೇಳಿಕೊಳ್ಳುವಂತಹ ಯಾವುದೇ ಸಾರ್ವಜನಿಕ ಉದ್ಯಮ ಗಡಿಯಲ್ಲಿ ಸ್ಥಾಪಿತಗೊಂಡಿಲ್ಲ. ಇದರಿಂದಾಗಿ ಇಲ್ಲಿಯ ಜನ ಅನಿವಾರ್ಯವಾಗಿ ಮಹಾರಾಷ್ಟ್ರದ ಇಚಲಕರಂಜಿ, ಸಾಂಗ್ಲಿ, ಕೊಲ್ಹಾಪೂರ, ಮಿರಜ ಮುಂತಾದ ನಗರಗಳಿಗೆ ಕೆಲಸ ನಿಮಿತ್ತ ಹೋಗಿ, ಅದೇ ಭಾಷೆಗೆ ಅಂಟಿಕೊಂಡು ತಾಯ್ನುಡಿಯನ್ನು ಮರೆಯುತ್ತಿದ್ದಾರೆ.

ವ್ಯಾಪಾರಿಗಳು ಸಹ ತಮ್ಮ ನಿತ್ಯದ ವಹಿವಾಟಿಗಾಗಿ ಮಹಾರಾಷ್ಟ್ರದ ಪಟ್ಟಣಗಳಿಗೆ ಹೋಗುವುದರಿಂದ ಅನಿವಾರ್ಯವಾಗಿ ಮರಾಠಿಯನ್ನು ಕಲಿಯುತ್ತಾರೆ. ತಾವು ಮಾತನಾಡುವ ಕನ್ನಡದಲ್ಲಿಯೂ ಸಹಜವಾಗಿ ಮರಾಠಿ ಸಂಖ್ಯೆ ಮತ್ತು ಶಬ್ದಗಳನ್ನು ಬಳಸುತ್ತಾರೆ. ಇದು ಗಡಿಭಾಗದಲ್ಲಿ ಸರ್ವೇಸಾಮಾನ್ಯ. ಇಲ್ಲಿ ನಡೆಯುವ ಜಾತ್ರೆ-ಉತ್ಸವಗಳು ಸಹ ಮರಾಠಿ ಪ್ರಭಾವಕ್ಕೆ ಒಳಗಾದದ್ದು ಕಂಡು ಬರುತ್ತದೆ.

ವೈವಾಹಿಕ ಸಂಬಧಗಳು ಎರಡೂ ರಾಜ್ಯಗಳ ನಡುವೆ ನಿರಾತಂಕವಾಗಿ ಹಾಗೂ ನಿರಂತರವಾಗಿ ನಡೆದುಕೊಂಡು ಬರುತ್ತಿವೆ. ಕರ್ನಾಟಕದ ಹುಡುಗಿಯನ್ನು ಮಹಾರಾಷ್ಟ್ರದ ಹುಡುಗನು ಮದುವೆಯಾದರೆ ಆ ಮನೆಯ್ಯವರು ಕನ್ನಡದ ಹುಡುಗಿಯ ಜೊತೆಗೆ ಮರಾಠಿಯನ್ನೇ ಮಾತನಾಡುತ್ತಾರೆ. ಇದರಿಂದ ಕನ್ನಡದ ಹುಡುಗಿ ಕ್ರಮೇಣವಾಗಿ ಮರಾಠಿಗಳಾಗುತ್ತಾಳೆ. ಆದರೆ ಮರಾಠಿಯ ಹುಡುಗಿಯನ್ನು ಕರ್ನಾಟಕದವರು ತೆಗೆದುಕೊಂಡರೆ ಆ ಮರಾಠಿ ಹುಡುಗಿ ಕರ್ನಾಟಕದಲ್ಲಿ ಬಂದು

ಮರಾಠಿಯನ್ನೇ ಮಾತನಾಡುತ್ತಾಳೆ. ಅಷ್ಟೇ ಅಲ್ಲ ಮನೆಮಂದಿಗೆಲ್ಲ ಮರಾಠಿಯನ್ನು ಕಲಿಸಿ ಮರಾಠಿ ಕುಟುಂಬವನ್ನು ನಿರ್ಮಿಸುತ್ತಾಳೆ. ಈ ರೀತಿಯ ವೈವಾಹಿಕ ಸಂಬಂಧಗಳಿಂದಾಗಿ ಕೂಡ ಗಡಿಭಾಗದಲ್ಲಿ ಕನ್ನಡ ಕೊರಗುತ್ತಿದೆ.

ಒಟ್ಟಿನಲ್ಲಿ ಚಿಕ್ಕೋಡಿಯ ಗಡಿಕನ್ನಡ ಪ್ರದೇಶವು ೧೭ನೇ ಶತಮಾನದಿಂದ ೨೦ನೇ ಶತಮಾನದವರೆಗೆ ಅಂದರೆ ಸುಮಾರು ೩೦೦ ವರ್ಷಗಳಕಾಲ ಪರಭಾಷಾ ದಾಸ್ಯದಲ್ಲಿದ್ದುದು ತಿಳಿದುಬರುತ್ತದೆ. ವೈವಾಹಿಕ ಸಂಬಂಧ, ಆರ್ಥಿಕ ಅವಲಂಬನೆ, ರಾಜಕೀಯ ನಿರ್ಲಕ್ಷತೆ, ಸರ್ಕಾರದ ಉಪೇಕ್ಷೆ ಇವೆಲ್ಲ ಕಾರಣಗಳಿಂದಾಗಿ ಇಂದಿಗೂ ಪೂರ್ಣಪ್ರಮಾಣದಲ್ಲಿ ಗಡಿಯಲ್ಲಿ ಕನ್ನಡ ನೆಲೆಗೊಂಡಿಲ್ಲ. ಸರ್ಕಾರಿ ಕಛೇರಿಗಳಲ್ಲಿ ಕನ್ನಡ ಕಡ್ಡಾಯ ಅನುಷ್ಠಾನ ಕುರಿತು ಬೇಕಾದಷ್ಟು ಆದೇಶಗಳಿದ್ದರೂ ಗಡಿಯಲ್ಲಿ ಮರಾಠಿ ಅಗ್ರಸ್ಥಾನದಲ್ಲಿದೆ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಕನ್ನಡದ ಸಾರ್ವಭೌಮತೆಗೆ, ಕನ್ನಡಿಗರ ಅಭಿಮಾನ ಪೂರ್ಣ ಅಸ್ತಿತ್ವ ಹಾಗೂ ನಮ್ಮ ನಾಡು–ನುಡಿ–ಜನಾಂಗದ ಅಭಿವೃದ್ಧಿಗಾಗಿ ಹಲವಾರು ಸಂಘಟನೆಗಳು ಶ್ರಮಿಸುತ್ತಿವೆ. ಗೆಳೆಯರ ಬಳಗ ಯಕ್ಸಂಬಾ, ವಕೀಲರ ಸಂಘ ಚಿಕ್ಕೋಡಿ, ಅಕ್ಕನ ಬಳಗ ಚಿಕ್ಕೋಡಿ, ಕನ್ನಡ ರಕ್ಷಣಾ ವೇದಿಕೆ, ಗಡಿ ಕನ್ನಡ ಬಳಗ ಚಿಂಚಣಿ, ಚಿಕ್ಕೋಡಿ ಚರಮೂರ್ತಿ ಮಠದ ಕನ್ನಡ ಬಳಗ, ಚುಟುಕು ಸಾಹಿತ್ಯ ಪರಿಷತ್ತು ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ತಾಲೂಕಾ ಘಟಕಗಳು, ಶಾಲಾ ಕಾಲೇಜುಗಳ ಸಾಂಸ್ಕೃತಿಕ ಸಂಘಗಳು, ಕನ್ನಡ ಪತ್ರಿಕಾ ವರದಿಗಾರರು, ಜಾನಪದ ಕಲಾವಿದರು, ಗ್ರಾಮೀಣ ಹಾಡುಗಾರರು ಹೀಗೆ ಯಾವುದೇ ಸರಕಾರದ ಸಹಾಯ ಮತ್ತು ಆಶ್ರಯವಿಲ್ಲದಿದ್ದರೂ ಕಾಲಕಾಲಕ್ಕೆ ಕನ್ನಡ ವಾತಾವರಣ ನಿರ್ಮಿಸುವಲ್ಲಿ ತಮ್ಮದೇ ಆದ ಸೇವೆಯನ್ನು ಸಲ್ಲಿಸುತ್ತಿವೆ.

ಅನಿಲ ಕಮತೆ, ಪಿ.ಜಿ. ಕೆಂಪಣ್ಣವರ, ಎಸ್.ವಾಯ್.ಹಂಜಿ, ಭರತ ಕುಂಬಾರ, ಕಲ್ಲಪ್ಪಣ್ಣಾ ಸಂಗೊಟಿ, ಸುಭ್ರಾವ ಎಂಟೆತ್ತಿನವರ ಮುಂತಾದವರು ವೈಯಕ್ತಿಕವಾಗಿ ಮತ್ತು ಸಾಂಘಿಕವಾಗಿ ಕನ್ನಡಕಾರ್ಯಗಳನ್ನು ನಿರಂತರವಾಗಿ ಮುಂದುವರೆಸಿಕೊಂಡು ಬರುತ್ತಿದ್ದಾರೆ. ಇದರೊಂದಿಗೆ ತಾಲೂಕಿನ ಸಾಹಿತಿಗಳು, ಕಲಾವಿದರು ನುಡಿಜಾಗೃತಿಗೆ ಶ್ರಮಿಸುತ್ತಿದ್ದಾರೆ. ಇದೇ ರೀತಿ ಚಿಕ್ಕೋಡಿ ತಾಲೂಕಿನ ಮಠಗಳು ಹಾಗೂ ಮಠಾಧೀಶರು 'ಕನ್ನಡವೇ ನಮ್ಮ ಧರ್ಮ' ಎಂಬುದನ್ನು ಅರಿತುಕೊಂಡು, ಕನ್ನಡ–ಕನ್ನಡಿಗ–ಕರ್ನಾಟಕವನ್ನು ಉಸಿರಾಗಿಸಿಕೊಂಡು, ಗಡಿನಾಡಿನಲ್ಲಿ ಕನ್ನಡದ ಕಂಪನ್ನು ಪಸರಿಸುತ್ತಿದ್ದಾರೆ. ಇಂತಹ ಮಠಗಳಲ್ಲಿ ಚಿಂಚಣಿಯ ಅಲ್ಲಮಪ್ರಭು ಸಿದ್ಧಸಂಸ್ಥಾನಮಠವು ಅಗ್ರಪಂಕ್ತಿಯಲ್ಲಿದೆ.

**ಚಿಂಚಣಿ ಗ್ರಾಮ:**

ಕರ್ನಾಟಕದ ಉತ್ತರದ ಗಡಿಜಿಲ್ಲೆಗಳಲ್ಲಿ ಬೆಳಗಾವಿ ಜಿಲ್ಲೆಯು ಒಂದು. ಈ ಜಿಲ್ಲೆಯ ಬೆಳಗಾವಿ, ಖಾನಾಪೂರ, ಹುಕ್ಕೇರಿ, ಚಿಕ್ಕೋಡಿ, ರಾಯಬಾಗ ಮತ್ತು ಅಥಣಿ ತಾಲೂಕುಗಳು ಗಡಿಭಾಗದ ತಾಲೂಕಗಳಾಗಿವೆ. ಕರ್ನಾಟಕ ಮಹಾರಾಷ್ಟ್ರ ಗಡಿಭಾಗದಿಂದ ಚಿಂಚಣಿಯು ೧೫ ಕಿ.ಮೀ ಅಂತರದಲ್ಲಿದೆ. ಚಿಕ್ಕೋಡಿಯಿಂದ ಪಶ್ಚಿಮಕ್ಕೆ ೫ ಕಿ.ಮೀ. ಕ್ರಮಿಸಿ, ಬಲಕ್ಕೆ ತಿರುಗಿ ೧ ಕಿ.ಮೀ. ಮುನ್ನಡೆದರೆ ಚಿಂಚಣಿ ಗ್ರಾಮ ತಲುಪುತ್ತೇವೆ. ಹಳ್ಳದ ದಂಡೆಯ ಮೇಲೆ ಈ ಗ್ರಾಮ ನೆಲೆಗೊಂಡಿದೆ. ಹಾಳುಮಣ್ಣಿನ ಇಟ್ಟಿಗೆ ಮತ್ತು ಕರಿಕಲ್ಲಿನ ಹಳೆಯ ಮನೆಗಳು ಗ್ರಾಮದಲ್ಲಿ ತಲೆಯೆತ್ತಿ ನಿಂತಿವೆ.

ಚಿಂಚಣಿಯು ಬಹು ಪ್ರಾಚೀನವಾದ ಗ್ರಾಮ. ಈ ಗ್ರಾಮಕ್ಕೆ 'ಚಿಂಚಣಿ'ಯೆಂದು ಹೆಸರು ಬರಲು ಊರಿನವರು ಹೇಳುವ ಒಂದು ಐತಿಹ್ಯ ಪ್ರಚಲಿತದಲ್ಲಿದೆ. ಗ್ರಾಮದಲ್ಲಿ ಒಂದು ಅತ್ಯಂತ ಪ್ರಾಚೀನವಾದ ಹುಣಸೆ ಮರವಿತ್ತು, ಆದ್ದರಿಂದ ಚಿಂಚಣಿಯೆಂಬ ಹೆಸರು ಬಂದಿತು. 'ಚಿಂಚ'ಎಂದರೆ ಹುಣಸೆ ಮರ ಅಥವಾ ಅದರ ಹಣ್ಣು. ಆದರೆ ಈ ಊರಿನಲ್ಲಿರುವ ಪ್ರಾಚೀನ ರಾಮಲಿಂಗೇಶ್ವರ ದೇವಾಲಯದ ಹಿನ್ನೆಲೆಯಲ್ಲಿ ನೋಡಿದರೆ, ಬೇರೆ ತೆರೆನಾಗಿಯೇ ಗ್ರಾಮ ನಾಮ ಉತ್ಪತ್ತಿಯಾಗಿರಬಹುದೆಂದು ತಿಳಿಯುತ್ತದೆ. 'ಚುಂಚ' ಎಂದರೆ 'ಶಿವ' ಎಂಬುದನ್ನು ನಾಡಿನ ಅನೇಕ ವಿದ್ವಾಂಸರು ಗುರುತಿಸಿದ್ದು ಇದಕ್ಕೆ ನಿದರ್ಶನವಾಗಿದೆ. ಚುಂಚಣಗಿರಿ, ಚುಂಚಣಸೂರು, ಚುಂಚೆಹಳ್ಳಿ ಮೊದಲಾದವುಗಳನ್ನು ಗಮನಿಸಿದಾಗ ಚಿಂಚಣಿ ಕೂಡ ಇದೇ ಸಾಲಿನಲ್ಲಿ ಸೇರ್ಪಡೆಯಾಗುತ್ತದೆ.

ರಾಮಾಯಣದ ಕಾಲದಲ್ಲಿ ರಾಮ-ಲಕ್ಷ್ಮಣರು ದಕ್ಷಿಣಭಾಗಕ್ಕೆ ಬರುವಾಗ ಈ ಗ್ರಾಮದಲ್ಲಿ ಎರಡು ಶಿವಲಿಂಗಗಳನ್ನು ಪೂಜಿಸಿದರೆಂಬುದು ಐತಿಹ್ಯವಿದೆ. ಇದಕ್ಕೆ ಪೂರಕವಾಗಿ ಗ್ರಾಮದ ರಾಮಲಿಂಗೇಶ್ವರ ದೇವಾಲಯದಲ್ಲಿ ಎರಡು ಲಿಂಗಗಳಿವೆ. ಇಂದಿಗೂ ಈ ಶಿವಲಿಂಗಗಳಿಗೆ ರಾಮ-ಲಕ್ಷ್ಮಣ ಲಿಂಗಗಳೆಂದು ಗ್ರಾಮಸ್ಥರು ಕರೆಯುತ್ತಾರೆ. ಆದ್ದರಿಂದ ಈ ಗ್ರಾಮವು ಶಿವಭಕ್ತರ ವಾಸಸ್ಥಳವಾದುದರಿಂದ ಚಿಂಚಣಿಯೆಂದು ಹೆಸರು ಪಡೆದಿದೆ. ಈ ಗ್ರಾಮ ನಾಮದ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆಗಳು ಆಗಬೇಕಾದ ಅಗತ್ಯತೆಯಿದೆ.

ಸುಮಾರು ೬೦೦೦ ಜನಸಂಖ್ಯೆ ಹೊಂದಿದ ಚಿಂಚಣಿ ಗ್ರಾಮವು ಪಂಚಾಯತಿಯನ್ನು ಹೊಂದಿದೆ. ಇಲ್ಲಿಯ ಜನರ ಮುಖ್ಯ ಉದ್ಯೋಗ ಒಕ್ಕಲುತನ. ಕೆಂಪು ಮಿಶ್ರಿತ ಕಪ್ಪು ಮಣ್ಣಿನಿಂದ ಕೂಡಿದ ಈ ಭೂಮಿ ತಂಬಾಕು, ಸೊಯಾಬಿನ್, ವಿಳ್ಯದೆಲೆ ಬೇಸಾಯಕ್ಕೆ ಅನುಕೂಲವಾಗಿದೆ. ಇಲ್ಲಿ ಬೆಳೆವ ವಿಳ್ಯದೆಲೆಗಳು ತಿನ್ನಲು ಬಹಳ

ರುಚಿಯಾಗಿರುತ್ತವೆ. ಈ ವಿಳ್ಯದೆಲೆಗಳು ಮುಂಬೈ ಮತ್ತು ಇನ್ನಿತರ ಪಟ್ಟಣಗಳಿಗೆ ಹಾಗೂ ವಿದೇಶಗಳಿಗೂ ರವಾನೆಯಾಗುತ್ತವೆ.

ಗ್ರಾಮದಲ್ಲಿ ಸುಮಾರು ೮೦% ಜನರು ಲಿಂಗಾಯತರಿದ್ದರೆ; ೨೦% ದಲಿತರು,ಮರಾಠರು ಮತ್ತು ಇಸ್ಲಾಂ ಜನರಿದ್ದಾರೆ. ರಾಮಲಿಂಗೇಶ್ವರನು ಗ್ರಾಮದೇವತೆಯಾಗಿದ್ದಾನೆ. ಈ ದೇವಸ್ಥಾನದ ಬಗೆಗೂ ಐತಿಹ್ಯವಿದೆ. ದೇಶದ ಎಲ್ಲ ಪ್ರದೇಶಗಳಲ್ಲಿ ರಾಮಾಯಣ ಮತ್ತು ಮಹಾಭಾರತಕ್ಕೆ ಸಂಬಂಧಿಸಿದ ವಿಷಯಗಳನ್ನು ತಮ್ಮ ಗ್ರಾಮದೇವತೆಗಳಿಗೂ ಅನ್ವಯಿಸಿ ಹೇಳುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ ರಾಮಾಯಣಕ್ಕೂ ಮತ್ತು ರಾಮಲಿಂಗೇಶ್ವರ ದೇವಸ್ಥಾನಕ್ಕೂ ಸಂಬಂಧ ಕಲ್ಪಿಸುವ ಕಥೆಗಳು ಗ್ರಾಮಸ್ಥರಲ್ಲಿ ದಟ್ಟವಾಗಿವೆ. ರಾಮ-ಲಕ್ಷ್ಮಣರು ಉತ್ತರ ಭಾರತದಿಂದ ದಕ್ಷಿಣಭಾಗದ ಕಡೆಗೆ ಸಂಚರಿಸುತ್ತಾ ಬರುವಾಗ ಲಿಂಗ ಪೂಜೆಯನ್ನು ಮಾಡಲು ಎರಡು ಲಿಂಗಗಳನ್ನು ಸ್ಥಾಪಿಸಿದರು. ಆ ಎರಡು ಶಿವಲಿಂಗಗಳೇ ರಾಮಲಿಂಗೇಶ್ವರ ದೇವಾಲಯದಲ್ಲಿರುವ ಲಿಂಗಗಳು ಎಂಬುದು ಗ್ರಾಮಸ್ಥರ ನಂಬಿಗೆ.

೧೨ನೆಯ ಶತಮಾನದಲ್ಲಿ ಅಲ್ಲಮಪ್ರಭುದೇವರು ದೇಶ ಸಂಚಾರವನ್ನು ಮಾಡುತ್ತ ಚಿಂಚಣಿಗೆ ಬಂದು ಅನುಷ್ಠಾನಗೈದ ಬಗೆಗೂ ಐತಿಹ್ಯ ಕೇಳಿಬರುತ್ತದೆ. ಅದರ ಕುರುಹಾಗಿ ಅಲ್ಲಮಪ್ರಭುದೇವರು ಅನುಷ್ಠಾನ ಮಾಡಿದ ಗದ್ದುಗೆ ಗ್ರಾಮದಲ್ಲಿದೆ. ಈ ವಿಚಾರವನ್ನು ಗ್ರಾಮಸ್ಥರು ಮತ್ತು ಸುತ್ತಮುತ್ತಲಿನ ಊರಿನ ಹಿರಿಯರು ಈಗಲೂ ಹೇಳುತ್ತಾರೆ. ಅದುವೇ ಇಂದು ಅಲ್ಲಮಪ್ರಭು ಸಿದ್ಧಸಂಸ್ಥಾನಮಠವಾಗಿ, ಕನ್ನಡ ಮಠವಾಗಿ ನಾಡ್ ತುಂಬಾ ಪ್ರಸಿದ್ಧಿಯನ್ನು ಹೊಂದಿದೆ.

ಐತಿಹಾಸಿಕವಾಗಿ ಈ ಗ್ರಾಮದಲ್ಲಿ ಸಿಗುವ ಆಧಾರಗಳೆಂದರೆ ; ಮಾಸ್ತಿ ಕಲ್ಲುಗಳು, ವೀರಗಲ್ಲುಗಳು ಮತ್ತು ಗಜಗೌರಿಗಲ್ಲುಗಳು. ಈ ಕಲ್ಲುಗಳು ರಾಮಲಿಂಗೇಶ್ವರ ಗುಡಿಯಲ್ಲಿ ನೋಡಲು ಸಿಗುತ್ತವೆ. ಆದರೆ ಇವುಗಳ ಮೇಲೆ ಯಾವುದೇ ಬರಹಗಳಿಲ್ಲದ್ದರಿಂದ ಇವುಗಳ ಕಾಲದ ಬಗೆಗೆ ನಿಖರವಾಗಿ ತಿಳಿಯುವುದಿಲ್ಲ. ಇದೇ ರೀತಿ ಈ ಊರಿನಲ್ಲಿ ಅನೇಕ ಐತಿಹಾಸಿಕ ಅವಶೇಷಗಳಿದ್ದು ಅವುಗಳ ವಿಸ್ತೃತವಾದ ಅಧ್ಯಯನವನ್ನು ನಡೆಸಬೇಕಾಗಿದೆ.

ಗ್ರಾಮದಲ್ಲಿ ಒಂದು ಸರಕಾರಿ ಕನ್ನಡ ಪ್ರಾಥಮಿಕ ಶಾಲೆ, ಖಾಸಗಿ ಕನ್ನಡ ಶಾಲೆ, ಸರಕಾರಿ ಪ್ರೌಢಶಾಲೆ, ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯಗಳಿವೆ. ಸಹಕಾರಿ ಸೊಸಾಯಿಟಿಗಳು ಗ್ರಾಮದಲ್ಲಿವೆ. ೯೫% ಜನರು ಕನ್ನಡ ಭಾಷೆಯನ್ನು ಮಾತನಾಡುತ್ತಾರೆ. ಉಳಿದ ೫% ಜನರು ಕ್ವಚಿತ್ತಾಗಿ ಮರಾಠಿ ಮತ್ತು ಉರ್ದು ಭಾಷೆಯನ್ನು ಮಾತನಾಡುತ್ತಾರೆ. ಇಲ್ಲಿ ४೦-೫೦ ವರ್ಷಗಳ ಹಿಂದೆ ಸ್ಥಿತಿ ಸ್ವಲ್ಪ ಭಿನ್ನವಾಗಿತ್ತು. ಸ್ವಲ್ಪ ಮಟ್ಟಿಗೆ ಮರಾಠಿ ಪ್ರಾಭಲ್ಯ ಇಲ್ಲಿ ಕಾಣಿಸಿಕೊಂಡಿತ್ತು. ೧೯೬೪ರ ನಂತರ ಅಲ್ಲಮಪ್ರಭುಸ್ವಾಮಿಗಳ ಕನ್ನಡದ ಕಾರ್ಯಗಳಿಂದಾಗಿ ಚಿಂಚಣಿ ಪರಿಸರದಲ್ಲಿ

ಕನ್ನಡ ಭಾಷೆ ಗಟ್ಟಿಗೊಂಡಿದೆ. ಚಿಂಚಣಿ ಎಂದರೆ ಅಲ್ಲಮಪ್ರಭು ಸಿದ್ಧಸಂಸ್ಥಾನ ಮಠ ; ಅಲ್ಲಮಪ್ರಭು ಸಿದ್ಧಸಂಸ್ಥಾನ ಮಠವೆಂದರೆ ಚಿಂಚಣಿ. ಎನ್ನುವಷ್ಟು ಮಠ ಮತ್ತು ಗ್ರಾಮಗಳು ಅನ್ಯೋನ್ಯವಾಗಿವೆ.

ಚಿಂಚಣಿಯಿಂದ ಪೂರ್ವಕ್ಕೆ ಬಂದಂತೆ ಗ್ರಾಮಗಳಲ್ಲಿ ಕನ್ನಡದ ಪ್ರಭಾವ ಗಾಢವಾಗಿದೆ. ಆದರೆ ಪಶ್ಚಿಮೋತ್ತರಕ್ಕೆ ಹೋದಂತೆ ಸಿಗುವ ಕರ್ನಾಟಕದ ಹಳ್ಳಿಗಳಲ್ಲಿ ಮರಾಠಿಯ ಪ್ರಭಾವ ಕಾಣಿಸಿಕೊಳ್ಳುತ್ತದೆ. ಇದು ೨ ದಶಕಗಳ ಹಿಂದೆ ಇನ್ನೂ ತೀವ್ರವಾಗಿತ್ತು. ಗಳತಗಾ, ಅಕ್ಕೋಳ, ಸದಲಗಾ, ಬೆಡಕಿಹಾಳ, ಶಿರಗಾಂವ, ಶಿರಗಾಂವವಾಡಿ, ಗಿರಗಾಂವ, ಕೋಥಳಿ, ಬೋರಗಾಂವ, ಕುನ್ನೂರ, ಜನವಾಡ, ಶಿರದವಾಡ ಈ ಗ್ರಾಮಗಳಲ್ಲಿ ಇತ್ತೀಚಿಗೆ ಕನ್ನಡ ಸಂಸ್ಕೃತಿಯ ಪುನರುಜ್ಜೀವನ ಕಾಣಿಸುತ್ತಿದೆ. ಇದಕ್ಕೆ ಶ್ರೀ ಅಲ್ಲಮಪ್ರಭು ಸ್ವಾಮಿಗಳ ಕನ್ನಡಪರ ಚಟುವಟಿಕೆಗಳು ಕಾರಣವಾಗಿವೆ.

**ಚಿಂಚಣಿ ಸಿದ್ಧಸಂಸ್ಥಾನಮಠ:**

'ಮಠ' ಶಬ್ದ ಮೂಲತಃ ಸಂಸ್ಕೃತ ಪದ. ಇದರ ಅರ್ಥ ವಾಸಿಸು, ವಾಸಸ್ಥಾನ, ಶಾಲೆ, ಕಾಲೇಜು, ವಿದ್ಯಾಕೇಂದ್ರ, ದೇವಾಲಯ ಮುಂತಾದ ಅರ್ಥವನ್ನು ನೀಡುತ್ತದೆ. ಅಮರ ಕೋಶದ ಪ್ರಕಾರ 'ಮಠಃ ಛಾತಾದಿನಿಲಯ' ಮತ್ತು 'ಮಠಂತಿ ಛಾತ್ರಾದಯ ಅತ್ರಮಠಃ' ಎಂದಿರುವುದರಿಂದ ಮಠವೆಂದರೆ; ವಿದ್ಯಾರ್ಥಿಗಳ ವಾಸಸ್ಥಳ ಎಂದು ಅರ್ಥಮಾಡಿಕೊಳ್ಳಬಹುದು.

"ಬಿ.ಕೆ.ಮುಖರ್ಜಿಯವರ ಪ್ರಕಾರ, ಕಾನೂನಿನ ವ್ಯವಹಾರಗಳಲ್ಲಿ ಮಠವೆಂದರೆ; ಆತ್ಮವಿದ್ಯೆಯಲ್ಲಿ ಸಾಧನೆಯನ್ನು ಗಳಿಸಿದ ಒಬ್ಬ ಮಹಾವ್ಯಕ್ತಿಯ ಹಿರಿತನದಲ್ಲಿ ನಡೆಯುವ ಒಂದು ಧಾರ್ಮಿಕ ಸಂಸ್ಥೆ. ಒಂದು ವಿಶಿಷ್ಟ ಪಂಗಡಕ್ಕೆ ಸೇರಿದ ನೈಷ್ಠಿಕರ ಅನುಕೂಲಕ್ಕಾಗಿ ಸ್ಥಾಪಿತವಾದುದು. ಇವರು ಅಂತಹ ಮಠದ ಅದಿಪತಿಯ ಶಿಷ್ಯರಾಗಿ ಅಧ್ಯಾತ್ಮ ವಿದ್ಯೆಯ ಜಿಜ್ಞಾಸುಗಳಾಗಿರುತ್ತಾರೆ"[5]. ಅಂದರೆ, ಮಠಗಳು ನಿರ್ಧಿಷ್ಟವಾಗಿ ಒಂದು ಪಂಗಡಕ್ಕೆ ಸೇರಿಕೊಂಡಿದ್ದು, ಅದೊಂದು ಧಾರ್ಮಿಕ ಸಂಸ್ಥೆಯಾಗಿದೆ. ಶಿವಶರಣರ ಜೀವನ ಚರಿತ್ರೆಗಳನ್ನು ಕಾವ್ಯನ್ನಾಗಿಸಿದ ಶಿವಕವಿಗಳ ದೃಷ್ಟಿಯಲ್ಲಿ ಮಠವೆಂದರೆ; ಮಹಾತ್ಮರ, ಭಕ್ತರ, ವಾಸಸ್ಥಾನ ಮತ್ತು ಪವಿತ್ರಸ್ಥಾನವೆಂದು ಭಾವಿಸಲಾಗಿದೆ.

ಮನದ ಕತ್ತಲೆಯನ್ನು ಕಳೆದು ಬೆಳಕನ್ನೀವ ದಾರಿದೀಪಗಳಾಗಿ ಮಠಗಳು ಪ್ರಾಚೀನಕಾಲದಿಂದಲೂ ನಡೆದುಕೊಂಡು ಬಂದಿವೆ. ಸಮಾಜದ ಆರೋಗ್ಯವನ್ನು ಕಾಪಾಡುವ ವೈದ್ಯನಾಗಿ, ಅಧ್ಯಾತ್ಮಿಕ ಶಿಕ್ಷಣವನ್ನು ನೀಡುವ ಶಿಕ್ಷಣ ಕೇಂದ್ರಗಳಾಗಿ ಮಾನವನ ಸರ್ವತೋಮುಖ ಅಭಿವೃದ್ಧಿಯಲ್ಲಿ ತಮ್ಮನ್ನು ತಾವು ಸಕ್ರಿಯವಾಗಿ

ತೊಡಗಿಸಿಕೊಂಡಿರುವುದು ತಿಳಿದುಬರುತ್ತದೆ. "ಬಸವೇಶ್ವರರ ಹಿಂದಿನ ಕಾಲದಲ್ಲಿ ಕರ್ನಾಟಕದಲ್ಲಿ ಪಾಶುಪಥ ಮತ್ತು ಕಾಳಾಮುಖರ ಮಠಗಳಿದ್ದುದರ ಬಗ್ಗೆ ಶಾಸನಗಳು ಉಲ್ಲೇಖಿಸುತ್ತವೆ. ಕರ್ನಾಟಕದಲ್ಲಿ ಲಕುಲೀಶ ಪ್ರಭಾವವು ಕ್ರಿ.ಶ. ೭ನೇ ಶತಮಾನದಲ್ಲಿ ಪ್ರಾರಂಭವಾಗಿ ೧೧ ರಿಂದ ೧೩ನೇ ಶತಮಾನದವರೆಗೆ ಹೆಚ್ಚಾಯಿತು"[೧೦].

ಶಿವಶರಣರ ವಚನಗಳಲ್ಲಿ 'ಮಠ'ದ ಪ್ರಸ್ತಾಪವಿದೆ. ಆಗಲೇ ಕನ್ನಡ ನಾಡಿನಲ್ಲಿ ಮಠಗಳ ಅಸ್ತಿತ್ವ ಇರುವುದನ್ನು ಜೇಡರ ದಾಸಿಮಯ್ಯನ ಈ ವಚನ ಸೂಚಿಸುತ್ತದೆ.

> "ಬರುಶಠಗನ ಭಕ್ತಿದಿಟವೆಂದು ನಚ್ಚಲುಬೇಡಾ
> ಮಠದೊಳಗಣ ಬೆಕ್ಕು ಇಲಿಯಕಂಡು
> ಪುಟನೆಗೆದಂತಾಯಿತು ಕಾಣಾ ರಾಮನಾಥ"[೧೧]

ಅಂದರೆ ದಾಸಿಮಯ್ಯನ ಕಾಲಾವಧಿಯಲ್ಲಿಯೇ ಹೆಚ್ಚಿನ ಪ್ರಮಾಣದಲ್ಲಿ ಮಠಗಳು ಅಸ್ತಿತ್ವದಲ್ಲಿದ್ದ ಬಗ್ಗೆ ಹಾಗೂ ಸಮಾಜದಲ್ಲಿ ಪವಿತ್ರ ಸ್ಥಳಗಳೆಂದು ಜನರು ಗುರುತಿಸಲ್ಪಟ್ಟಿರುವುದು ಗೊತ್ತಾಗುತ್ತದೆ.

ವೀರಶೈವ ಮಠಗಳನ್ನು ನಾವು ಮುಖ್ಯವಾಗಿ ಎರಡು ರೀತಿಯಾಗಿ ವಿಂಗಡಿಸಬಹುದು. ಒಂದು ಗುರುಸ್ಥಲದ ಮಠಗಳು ಮತ್ತೊಂದು ವಿರಕ್ತಮಠಗಳು. ಪಂಚಪೀಠಗಳು ಗುರುಸ್ಥಲದ ಮಠಗಳಾದರೆ, ೧೨ನೇ ಶತನಮಾನದ ಅಲ್ಲಮಪ್ರಭುವನ್ನು ಅನುಸರಿಸಿಕೊಂಡವುಗಳು ವಿರಕ್ತಮಠಗಳಾಗಿ ಪ್ರಸಿದ್ಧಿಯನ್ನು ಹೊಂದಿವೆ.

ಚಿಂಚಣಿ ಸಿದ್ಧಸಂಸ್ಥಾನಮಠವು ಅಲ್ಲಮಪ್ರಭು ಸಂಪ್ರದಾಯವನ್ನು ಅನುಸರಿಸಿಕೊಂಡ ಮಠವಾಗಿದೆ. ನಾಲ್ಕು ಯುಗಗಳಲ್ಲಿ ಜಗಹಿತಾರ್ಥವಾಗಿ ಅವತಾರ ತಾಳಿದ ಅಲ್ಲಮಪ್ರಭುಗಳು ಲಿಂಗಾಂಗ ಸಮರಸಭಾವದಲ್ಲಿ ನಿಬ್ಬರಗಾದವರು. ಶ್ರೀ ಅನಿಮಿಷದೇವರಿಂದ ಲಿಂಗವನ್ನು ಪಡೆದು ಅವರೇ ತನ್ನ ದೇವರು, ತನ್ನ ಗುರುವೆಂದು ತಿಳಿದುಕೊಂಡು ಷಟಸ್ಥಲ ಜ್ಞಾನಚಕ್ರವರ್ತಿಯಾಗಿ ವಿವಿಧ ಶರಣರಿಗೆ ಸದ್ಬೋಧನೆಯನ್ನು ನೀಡಿದರು. ಕಲ್ಯಾಣದಲ್ಲಿ ಶ್ರೀ ಬಸವೇಶ್ವರರು ಸ್ಥಾಪಿಸಿದ ಶೂನ್ಯಪೀಠದ ಅಧ್ಯಕ್ಷ ಪದವಿ ಅಲಂಕರಿಸಿ ಸಕಲ ಶರಣಸಂಕುಲಕ್ಕೆ ಶಿವತ್ವನ್ನು ಅರುಹಿ ವಿರಶೈವ ಲಿಂಗಾಂಗಿ ಧರ್ಮದ ಉದ್ಧಾರಕ್ಕಾಗಿ ಕಲ್ಯಾಣದಿಂದ ದೇಶ ಸಂಚಾರಕ್ಕೆ ಹೊರಟರು.

ಅಲ್ಲಮಪ್ರಭುಗಳ ಚರಿತ್ರೆ ಮತ್ತು ಸಿದ್ಧಿಸಾಧನೆಗಳ ಹಿನ್ನೆಲೆಯಲ್ಲಿ "ದಕ್ಷಿಣದಲ್ಲಿ ಕಲ್ಯಾಣ, ಮಧ್ಯದಲ್ಲಿ ಬಳ್ಳಿಗಾವಿ, ಉತ್ತರದಲ್ಲಿ ಸೊನ್ನಲಾಪೂರ"[೧೨] ಈ ರೀತಿಯಾಗಿ ೩ ಧಾರ್ಮಿಕ ಜಾಗೃತಿ ಸ್ಥಳಗಳು ರೂಪುಗೊಂಡಿವೆ. ಶ್ರೀ ಪ್ರಭುದೇವರು ದೇಶದ ತುಂಬ ಸಂಚರಿಸುತ್ತ, ಕನ್ಯಾಕುಮಾರಿಯಿಂದ ಹಿಮಾಚಲದವರೆಗೆ ಸುಮಾರು ೧೨ ವರ್ಷಗಳ

ಕಾಲ ದೇಶ ಪರ್ಯಟನೆಯನ್ನು ಮಾಡಿ ಸುಮಾರು ೨೦ ಸಾವಿರ ವಿರಕ್ತಮಠಗಳನ್ನು ಸ್ಥಾಪಿಸಿದರು. ಈ ಎಲ್ಲ ಮಠಗಳಿಗೆ ಲಿಂಗ ತತ್ವಜ್ಞಾನ ಸಂಪನ್ನ ಸ್ವಾಮಿಗಳನ್ನು ಉತ್ತರಾಧಿಕಾರಿಗಳನ್ನಾಗಿ ಮಾಡಿ ಅವರಿಂದ ವಿರಶೈವಧರ್ಮ ಪ್ರಸಾರ ಕಾರ್ಯವನ್ನು ಮಾಡಿಸಿದರು.

"ಅಲ್ಲಲ್ಲಿ ನಾನಾದೇಶಂಗಳೊಳು ಸುಳಿದು ಬರುತ್ತ ತದ್ದೇಶಗಳಂ ಪಾವನ ಮಾಡುತ್ತ ಕೇದಾರಮಂ ಪೊಕ್ಕಂ. . . . . ಸವಾಲಕ್ಷ ಪರ್ವತಗಳಂ ತಿರುಗಿ ಗುಹಾಂತರದೊಳು ಅಲ್ಲಲ್ಲಿ ವಿಶ್ರಾಮಮಂ ಗೈಯ್ಯುತ್ತ ಎಂದು ಶೂನ್ಯ ಸಂಪಾದನೆಯಲ್ಲಿ ಪ್ರಭುದೇವರ ದೇಶಸಂಚಾರದ ಉಲ್ಲೇಖಗಳು ದೊರೆಯುತ್ತವೆ"[೧೩]. ಅಲ್ಲಮಪ್ರಭುಗಳು ನಿರ್ಧಿಷ್ಟವಾಗಿ ಯಾವದಾರಿಯಲ್ಲಿ ಪ್ರಯಾಣ ಮಾಡಿದರು, ಎಲ್ಲೆಲ್ಲಿ ಸಂದರ್ಶನ ನೀಡಿದರು ಎಂಬುದರ ಬಗ್ಗೆ ಪೂರ್ಣವಾಗಿ ಇಂದಿಗೂ ಖಚಿತಗೊಂಡಿಲ್ಲ. ಆದರೆ ಅವರು ಸಂಚರಿಸಿದ ತಾಣಗಳೆಂದು ಹೇಳಲಾಗುವ ಅನೇಕ ಸ್ಥಳಗಳಿವೆ. ಅವರ ಬಗೆಗೆ ಅನೇಕ ಐತಿಹ್ಯಗಳು ಹಾಗೂ ಹೇಳಿಕೆಗಳು ಜನರ ಮನದಲ್ಲಿ ಹಚ್ಚು ಹಸಿರಾಗಿವೆ. ಈ ರೀತಿಯಾಗಿ ಸಂಚಾರ ಮಾಡುವಾಗ "ತೇರದಾಳ, ಚಿಕ್ಕೋಡಿ, ಹುಕ್ಕೇರಿ ಪ್ರದೇಶ, ಗೋಕಾಕ ಪ್ರದೇಶ, ಗೂಗಿಕೊಳ್ಳ ಮುಂತಾದ ಸ್ಥಾಣಗಳಲ್ಲಿ ಬಂದು ಲಿಂಗಾರ್ಚನೆ ಮಾಡಿಕೊಂಡಿದ್ದರಿಂದಲೇ ಪ್ರಭುದೇವರ ಮಠಗಳೆಂದು ಪ್ರಸಿದ್ಧವಾಗಿವೆ"[೧೪]. ಅದರ ಕುರುಹುಗಳೇ ಈಗಿರುವ ಪ್ರಭುದೇವರ ದೇವಾಲಯಗಳು ಹಾಗೂ ಮಠಗಳು.

ಈ ಎಲ್ಲ ಕಾರಣಗಳಿಂದ ಶಿವಮೊಗ್ಗಾ ಜಿಲ್ಲೆಯ ಬಳ್ಳಿಗಾವಿಯಲ್ಲಿ ಜನಿಸಿ ಮಾಯೆಯನ್ನು ಗೆದ್ದು ದೇಶಸಂಚಾರ ಮಾಡುತ್ತ ಮಹಾರಾಷ್ಟ್ರದ 'ಆಳತೆ'ಯಿಂದ ಬರುವಾಗ ಚಿಕ್ಕೋಡಿ ತಾಲೂಕಿನ ಚಿಂಚಣಿಯಲ್ಲಿ ಅನುಷ್ಠಾನವನ್ನು ಗೈದು ತೇರದಾಳಕ್ಕೆ ಸಾಗಿದ ಐತಿಹ್ಯ ಪ್ರಚಲಿತದಲ್ಲಿದೆ. ಇದಕ್ಕೆ ಪೂರಕವಾಗಿ ಮಹಾರಾಷ್ಟ್ರದ ಆಳತೆ, ಕರ್ನಾಟಕದ ತೇರದಾಳ ಹಾಗೂ ಚಿಂಚಣಿಗಳಲ್ಲಿ ಪ್ರಭುದೇವರು ಅನುಷ್ಠಾನ ಗೈದಿದ್ದಾರೆ ಎಂಬುದಕ್ಕೆ ಪುಷ್ಠಿಕೊಡುವ ತೋರುಗದ್ದುಗೆಗಳಿವೆ. ಚಿಂಚಣಿಯಲ್ಲಿಯ ಗದ್ದುಗೆಯ ಮೇಲೆ ಕಲ್ಲಿನ ಲಿಂಗದ ಮೂರ್ತಿ ಇದೆ. ಎಡಬದಿಯಲ್ಲಿ ತಾಮ್ರದ ಕುಂಬವಿದ್ದು ಅದು ಬೆಸುಗೆಯಿಂದ ಬಂಧಿತವಾಗಿದೆ. ಇದು ನಿತ್ಯವು ಪೂಜೆಗೊಳ್ಳುತ್ತದೆ. ಇದು ಮಾಯಾದೇವಿಯೆಂದು, ಕರ್ಣಾಕರ್ಣಿಕೆಯೆಂದು ಪ್ರಸಿದ್ಧಿ ಪಡೆದಿದೆ. ಇದರಲ್ಲಿ ಪಾವನವಾದ ಗಂಗಾಜಲ ಇದ್ದಿರಬೇಕೆಂದು ಭಕ್ತರ ತರ್ಕ. ಪ್ರಭುದೇವರು ೨೦ ಸಾವಿರ ಮಠಗಳನ್ನು ಸ್ಥಾಪಿಸಿದ್ದಾರೆಂದು ಐತಿಹ್ಯವಿರುವಾಗ ಚಿಂಚಣಿಮಠವು ಆ ಪಟ್ಟಿಯಲ್ಲಿ ಬರುತ್ತದೆಂದು ಸ್ಪಷ್ಟವಾಗುತ್ತದೆ.

"ಅಲ್ಲಮಪ್ರಭು ಸ್ವಾಮಿಗಳ ಹಿರಿತನದಲ್ಲಿ ಶಿವಶರಣರು ಸೃಷ್ಟಿಸಿದ ೧೧ಶಿಟರ ಕಲ್ಯಾಣದ ಶೂನ್ಯಸಿಂಹಾಸನವನ್ನು ವಿರಕ್ತಪೀಠಗಳ ಮೊದಲ ಸಾಂಸ್ಥಿಕ ಕೇಂದ್ರವೆನ್ನಬಹುದು. ವೀರಶೈವಮಠಗಳ ಪರಂಪರೆಗೂ ಇದಕ್ಕೂ ಗಾಢವಾದ

ಸಂಬಂಧವಿದೆ”[೧೫] ಇಂತಹ ವಿರಕ್ತ ಪರಂಪರೆಯ ಗಾಢವಾದ ಸಂಬಂಧಹೊಂದಿದ ಪೀಠಗಳಲ್ಲಿ ಚಿಂಚಣಿಯ ಅಲ್ಲಮಪ್ರಭು ಸಿದ್ಧಸಂಸ್ಥಾನ ಮಠವು ಒಂದಾಗಿದೆ. ಕನ್ನಡ–ಕನ್ನಡಿಗ–ಕರ್ನಾಟಕ ಎಂಬ ಮಂತ್ರವನ್ನು ಉಸಿರಾಗಿಸಿಕೊಂಡು ಸಧ್ಯದ ಪೀಠಾಧಿಪತಿಗಳಾದ ಶ್ರೀ ಅಲ್ಲಮಪ್ರಭುಸ್ವಾಮಿಗಳು ನಿರಂತರವಾಗಿ ಕಾರ್ಯಗೈಯ್ಯುತ್ತಿದ್ದಾರೆ. ಸುಮಾರು ೮೦೦ ವರ್ಷಗಳ ಇತಿಹಾಸವನ್ನು ಹೊಂದಿರುವ (ಈ ಮಠದ ಕಾಲದ ಬಗೆಗೆ ತಿಳಿದುಕೊಳ್ಳಲು ನಿರ್ಧಿಷ್ಟವಾದ ಸಂಶೋಧನೆಗಳು ಆಗಬೇಕಾದ ಅಗತ್ಯತೆ ಇದೆ) ಶ್ರೀಮಠವು ಇದುವರೆಗೆ ೮ ಜನ ಸ್ವಾಮಿಗಳನ್ನು ಕಂಡಿದ್ದು ೯ನೆಯವರಾಗಿ ಸಧ್ಯದ ಪೀಠಾದಿಪತಿಗಳಾದ ಶ್ರೀಅಲ್ಲಮಪ್ರಭು ಸ್ವಾಮಿಗಳು ಕಾರ್ಯಗೈಯ್ಯುತ್ತಿದ್ದಾರೆ.

ವಚನಕಾರರಾದ ಅಲ್ಲಮಪ್ರಭುಗಳೇ ಶ್ರೀಮಠದ ಮೊದಲ ಪೀಠಾಧಿಪತಿಗಳು ಎಂಬುದಕ್ಕೆ ಯಾವದೇ ಆಧಾರಗಳಿಲ್ಲ. ಪೀಠದ ಶ್ರೀಗಳು ತಮ್ಮ ಕುರಿತಾಗಿ ಯಾವುದೇ ದಾಖಲೆಗಳನ್ನು ಇಡುವ ಪರಿಪಾಠ ಇರಲಿಲ್ಲವಾಗಿ ಈ ದಿಶೆಯಲ್ಲಿ ನಮಗೆ ಹೆಚ್ಚಿನ ಇತಿಹಾಸ ದೊರಕುವುದಿಲ್ಲ. ಶ್ರೀಮಠದ ಮೊದಲ ಪೀಠಾಧಿಪತಿಗಳು ‘ಮಗಿ ಅಲ್ಲಮಪ್ರಭುಗಳು’ ಎಂಬುದು ಸಧ್ಯದ ಪೀಠಾಧಿಪತಿಗಳ ಅಭಿಪ್ರಾಯವಾಗಿದೆ. ಇಲ್ಲಿಯವರೆಗೆ ಆಗಿಹೋದ ೮ ಜನ ಮಹಾಸ್ವಾಮಿಗಳ ವಂಶಾವಳಿಯು ಮಾತ್ರ ಲಭ್ಯವಿದೆ. ಇದಕ್ಕೂ ಹೆಚ್ಚಾಗಿ ಹಿಂದಿನ ಮಹಾಸ್ವಾಮಿಗಳ ಹೆಸರುಗಳು ಕೇಳಿಬರುವುದಿಲ್ಲ. ಸಿದ್ಧಿಪುರುಷರು, ಪವಾಡಪುರುಷರು ಆಗಾಗ ಜನ್ಮತಳೆದು ಚಿಂಚಣಿ ಶ್ರೀ ಅಲ್ಲಮಪ್ರಭುಮಠದ ಉಜ್ವಲವಾದ ಪರಂಪರೆಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಅಂತಹ ಶ್ರೀಗಳ ಪರಂಪರೆಯನ್ನು ಈ ರೀತಿಯಾಗಿ ಗುರುತಿಸಬಹುದು.

**ಶ್ರೀಗಳ ಪರಂಪರೆ:**

೧. ಶ್ರೀ ಅಲ್ಲಮಪ್ರಭು ದೇವರು
೨. ಶ್ರೀ ಜೋಗೋಜಿ ಬಾವಾಗಳು
೩. ಶ್ರೀ ನಿಜಲಿಂಗ ಬಾವಾಗಳು
೪. ಶ್ರೀ ಮುಕುಂದ ಬಾವಾಗಳು
೫. ಶ್ರೀ ಅಲ್ಲಮಪ್ರಭು ಸ್ವಾಮಿಗಳು
೬. ಶ್ರೀ ಸಿದ್ಧಪ್ರಭು ಸ್ವಾಮಿಗಳು
೭. ಶ್ರೀ ಅಲ್ಲಮಪ್ರಭು ಸ್ವಾಮಿಗಳು
೮. ಶ್ರೀ ಸಿದ್ಧಪ್ರಭು ಸ್ವಾಮಿಗಳು (ಬೆಂಢವಾಡ), ೧೯೫೪
೯. ಶ್ರೀ ಅಲ್ಲಮಪ್ರಭು ಸ್ವಾಮಿಗಳು (ಶಿರೋಳ), ೧೯೯೪

ಮೊದಲ ಶ್ರೀಗಳ ಬಗೆಗೆ ನಮಗೆ ಹೆಚ್ಚಿನ ವಿವರಗಳು ಲಭಿಸುವುದಿಲ್ಲ. ಜೋಗೋಜಿ ಬಾವಾಗಳು ಆಳತಗಿಯಿಂದ ಸಂಚರಿಸುತ್ತ ಚಿಂಚಣಿಗೆ ಬಂದು ಅರಳಿಗಿಡದ ಬುಡದಲ್ಲಿ ಹುಲ್ಲಿನ ಗುಡಿಸಲನ್ನು ಹಾಕಿಕೊಂಡು ಒಂದು ಕಳಶವನ್ನು ಸ್ಥಾಪಿಸಿ ಸದಾಕಾಲ ಶಿವಧ್ಯಾನದಲ್ಲಿ ತಲ್ಲೀನರಾಗಿದ್ದರು. ಅವರನ್ನು ಕಂಡ ಶ್ರೀ ಅಲ್ಲಮಪ್ರಭು ಸ್ವಾಮಿಗಳು ಈ ಸ್ಥಳದ ಮಹಿಮೆಯನ್ನು ಹೇಳಿದರು. ಜೋಗೋಜಿ ಬಾವಾಗಳು ಈ ಸ್ಥಳದ ಹಿರೆಮೆಗರಿಮೆಗಳನ್ನು ಭಕ್ತರಿಗೆ ತಿಳಿಸುತ್ತ ತಮ್ಮ ಸಿದ್ಧಿಗಳನ್ನು ಮಾಡತೊಡಗಿದರು. ಗ್ರಾಮದ ಕುಲಕರ್ಣಿಯವರಿಗೆ ಮಕ್ಕಳಿಲ್ಲದಿದ್ದಾಗ ಜೋಗೋಜಿ ಬಾವಾಗಳ ಅನುಗ್ರಹದಿಂದ ಸಂತಾನಫಲ ಪ್ರಾಪ್ತವಾಯಿತು. ಇದಕ್ಕೆ ಪ್ರತಿಯಾಗಿ ಕುಲಕರ್ಣಿಯವರು ೨೫ ಎಕರೆ ಭೂಮಿಯನ್ನು ಮಠಕ್ಕೆ ದಾನವಾಗಿ ಕೊಟ್ಟರು. ಆ ಹೊಲ ಇಂದಿಗೂ ಬಾವಾನ ಕೋಡಿಯೆಂದು ಪ್ರಸಿದ್ಧಿಪಡೆದಿದೆ. ಇದೇ ರೀತಿ ಜೋಗೋಜಿ ಬಾವಾಗಳು ೮೦ ಎಕರೆ ಭೂಮಿಯನ್ನು ಸಂಪಾದನೆ ಮಾಡಿದರೆಂಬ ಐತಿಹ್ಯ ಜನರಲ್ಲಿ ಇಂದಿಗೂ ಜೀವಂತವಿದೆ.

ಇವರ ನಂತರ ೩ ಮತ್ತು ೪ನೇ ಸ್ವಾಮಿಗಳು ಮಠದ ಪ್ರಾಚೀನ ಪರಂಪರೆಯನ್ನು ವ್ಯವಸ್ಥಿತವಾಗಿ ಕಾಯ್ದುಕೊಂಡು ಬಂದರು. ೫ನೆಯವರಾಗಿ ಅಲ್ಲಮಪ್ರಭು ಸ್ವಾಮಿಗಳು ಪ್ರಭುದೇವ ಮಠಕ್ಕೆ ಅಧಿಕಾರಿಯಾಗಿ ಬಂದು ತಮ್ಮ ಮಹಿಮೆಯಿಂದ ಜಾಪೂರ ಗೌಡರಿಗೆ ಸಂತಾನ ಕರುಣಿಸಿದ್ದು, ಕುಂಬಳಕಾಯಿ ಕಳ್ಳನನ್ನು ಕುಳಿತಲ್ಲಿಂದಲೇ ಕಂಡದ್ದು, ನೀರನ್ನು ತುಪ್ಪವಾಗಿಸಿದ್ದು, ಹಾಳುಬಾವಿಗೆ ನೀರು ಬರಿಸಿದ್ದು ಇನ್ನೂ ಮುಂತಾಗಿ ಹಲವಾರು ಪವಾಡಗಳನ್ನು ಮಾಡಿ ತೋರಿಸಿದರು. ಇವರ ತರುವಾಯ ಶ್ರೀ ಸಿದ್ಧಪ್ರಭುಗಳು ಮಠಾಧಿಪತಿಗಳಾದರು. ಇವರೂ ಸಹ ಹಲವಾರು ಪವಾಡಗಳ ಮೂಲಕ ಮಠದ ಪರಂಪರೆಯನ್ನು ಮುಂದುವರೆಸಿಕೊಂಡು ಬಂದರು.

ಈ ರೀತಿಯಾಗಿ ಸ್ವಾಮಿಗಳ ಇತಿಹಾಸ ಪವಾಡುಗಳಿಂದ ತುಂಬಿಹೋಗಿ ವಾಸ್ತವ ಸ್ಥಿತಿಯನ್ನು ತಿಳಿದುಕೊಳ್ಳಲು ನಮಗೆ ಸಾಧ್ಯವಾಗುತ್ತಿಲ್ಲ. ೭ನೆಯವರಾಗಿ ಅಲ್ಲಮಪ್ರಭುಗಳು ಮಠದ ಅಧಿಕಾರವನ್ನು ವಹಿಸಿಕೊಂಡರು. ಮಠದ ಆಡಳಿತ ಮತ್ತು ಧಾರ್ಮಿಕ ಪರಂಪರೆ ಮುಂತಾದ ಸತ್ಕ್ರಿಯೆಗಳನ್ನು ಯಥಾವತ್ತಾಗಿ ನೆರವೇರಿಸುತ್ತ ಬಂದರು. ತನ್ನ ಅನಾರೋಗ್ಯದ ನಿಮಿತ್ತ ಕಾರ್ಯಶಕ್ತಿ ಕುಂದಿದಾಗ ಭಕ್ತರನ್ನು ಕೂಡಿಸಿ "ಇನ್ನು ಮುಂದೆ ಈ ಮಠದ ಕಾರ್ಯಭಾರವನ್ನು ನೋಡಿಕೊಳ್ಳಲು ಉತ್ಸಾಹಿಯಾದ, ಯೋಗ್ಯ ಸ್ವಾಮಿಗಳನ್ನು ಹುಡುಕಿರಿ, ಅವರಿಗೆ ಈ ಮಠದ ಹಕ್ಕುಬಾಧ್ಯತೆಗಳನ್ನು ಒಪ್ಪಿಸುತ್ತೇನೆ" ಎಂದು ಹೇಳಿದರು. ಅಂತಹ ಸ್ವಾಮಿಗಳನ್ನು ಚಿಂಚಣಿಯ ಭಕ್ತರು ಹುಡುಕುತ್ತಿದ್ದಾಗ ಸಿದ್ಧಪ್ರಭು ಸ್ವಾಮಿಗಳು ದೊರೆತರು. ಇವರು ಈ ಮಠದ ೮ನೇ ಪೀಠಾಧಿಪತಿಗಳಾಗಿದ್ದಾರೆ.

ಶ್ರೀ ಸಿದ್ಧಪ್ರಭು ಸ್ವಾಮಿಗಳು ಬೆಂಢವಾಡದ ಶ್ರೀ ರೇವಣಸಿದ್ಧರ ಪರಮ ಭಕ್ತರ ಕುಟುಂಬದಲ್ಲಿ ಜನಿಸಿದರು. ಇವರ ಪೂರ್ವಾಶ್ರಮದ ಹೆಸರು ಶಿವಯ್ಯಾ. ೧೯೩೩ ರಲ್ಲಿ ಶ್ರೀ ರೇವಣಸಿದ್ದೇಶ್ವರ ಮಠದ ಶ್ರೀ ಗುರುಸಿದ್ಧಸ್ವಾಮಿಗಳು ಮಠದ ಮರಿಗಳಾದ ಶ್ರೀ ಶಿವಯ್ಯಾ ಅವರಿಗೆ ಲಿಂಗಧೀಕ್ಷೆ ನೀಡಿದರು. ಶಿವಲಿಂಗದೇವರೆಂದು ಹೆಸರಿಟ್ಟರು. ಶಿವಯೋಗ ಮಂದಿರಕ್ಕೆ ಹೋಗಿ ಯೋಗಾಭ್ಯಾಸ, ಅನುಷ್ಠಾನ, ಲಿಂಗಾರ್ಚನ ವಿಧಾನಗಳನ್ನು ಕಲಿತು ಮಠಕ್ಕೆ ಮರಳಿ ಬಂದರು. ಬೆಂಢವಾಡದ ಶ್ರೀ ರೇವಣಸಿದ್ದೇಶ್ವರ ವಿರಕ್ತಮಠವನ್ನು ಸುವ್ಯವಸ್ಥಿತವಾಗಿ ಅಭಿವೃದ್ಧಿಪಡಿಸಿದರು. ಚಿಂಚಣಿಯ ಭಕ್ತರು ತಮ್ಮೂರಿನ ಮಠವನ್ನು ಜಿರ್ಣೋದ್ಧಾರ ಮಾಡುವ ಕರ್ತೃತ್ವ ಶಕ್ತಿಯುಳ್ಳ ಸ್ವಾಮಿಗಳನ್ನು ಹುಡುಕುತ್ತಿರುವಾಗ ಶ್ರೀ ಶಿವಲಿಂಗಸ್ವಾಮಿಗಳು ಕಂಡರು. ಚಿಂಚಣಿ ಗ್ರಾಮದ ಜನರ ಬಯಕೆಯಂತೆ ಶಿವಲಿಂಗಸ್ವಾಮಿಗಳು ಪ್ರಭುದೇವ ಮಠದ ಪೀಠಾಧಿಪತಿಯಾಗಲು ಸಮ್ಮತಿ ಇತ್ತರು. ಬೆಂಢವಾಡದಲ್ಲಿ ಬೆರೋಂದು ಮರಿಬಿಟ್ಟು ಮಾರ್ಚ ೧೯೫೪ರಲ್ಲಿ ಚಿಂಚಣಿಗೆ ಬಂದು ಸಿದ್ಧಪ್ರಭುಗಳಾಗಿ ಮಠಕ್ಕೆ ಅಧಿಕಾರಿಗಳಾದರು. ಈ ಸಂದರ್ಭದಲ್ಲಿ ಪ್ರಭುದೇವರ ಮಠ ಪೂರ್ಣ ಜೀರ್ಣಾವಸ್ಥೆಗೆ ಬಂದಿತ್ತು. ಪೀಠ ಗುಹೆಯಲ್ಲಿ ನಿಸ್ತೇಜವಾಗಿತ್ತು. ಮಠದಲ್ಲಿ ಯಾವದೇ ರೀತಿಯ ವಸ್ತುಗಳಿರಲಿಲ್ಲ. ನೂರಾರು ಎಕರೆ ಜಮೀನು ಇದ್ದರೂ ಸಹ.ಅದು ಅಸ್ತವ್ಯಸ್ತವಾಗಿ ಬಿದ್ದುಕೊಂಡಿತ್ತು. ಅಲ್ಲೊಂದು ಹಂಚಿನ ಚಪ್ಪರ ಮಾತ್ರ ಇತ್ತು. ಇಂತಹ ಸಂದರ್ಭದಲ್ಲಿ ಅನುಷ್ಠಾನ ಮತ್ತು ಲಿಂಗಾರ್ಚಣೆಗೆ ಬೇಕಾದ ವಸ್ತುಗಳನ್ನು ಬೆಂಢವಾಡ ಮಠದಿಂದ ತರಿಸಿಕೊಳ್ಳುತ್ತಿದ್ದರು.

ಘಟಪ್ರಭಾದ ಶ್ರೀ ಜಗದ್ಗುರು ಗುರುಸಿದ್ದೇಶ್ವರ ಸಹಕಾರಿ ಆಸ್ಪತ್ರೆಯ ಚೇರಮನ್ನರಾಗಿ ಶ್ರೀಗಳು ಸರ್ವಾನುಮತದಿಂದ ನೇಮಕವಾಗಿದ್ದರು. ಭೂಗರ್ಭಶಾಸ್ತ್ರದ ಪರಿಣಿತರಾಗಿದ್ದ ಸಿದ್ಧಪ್ರಭುಗಳು ಚಿಂಚಣಿ ಮಠದ ಅಧಿಕಾರವನ್ನು ವಹಿಸಿಕೊಂಡಾಗಿನಿಂದ ಮಠದ ಆರ್ಥಿಕ ವ್ಯವಸ್ಥೆಯು ಸುಭದ್ರಗೊಂಡಿತು. ಇವರ ಪೀಠಾವಧಿಯಲ್ಲಿ ಮಠವು ಭವ್ಯವಾದ ಕಟ್ಟಡವನ್ನು ಕಂಡಿತು. ಸಿದ್ಧಪ್ರಭುಗಳು ಜಾಗತಿಕ ವಿಶ್ವಧರ್ಮ ಶಾಂತಿಸಮ್ಮೇಳನದಲ್ಲಿ ಭಾಗವಹಿಸಿದ್ದ ಮಹಾನ್ ಪಂಡಿತರಾಗಿದ್ದರು. ಮಠದ ಆದಾಯವು ಶ್ರೀಗಳ ವ್ಯವಹಾರಿಕ ಚತುರತೆಯಿಂದ ಹೆಚ್ಚಾಯಿತು. ನೂರಾರು ಎಕರೆ ಜಮೀನನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡು ಮಠದಲ್ಲಿ ನಿರಂತರವಾಗಿ ದಾಸೋಹಗೈಯ್ಯಲು ಸಹಾಯ ಕಲ್ಪಿಸಿದರು. ಜೀರ್ಣಾವಸ್ಥೆಯಲ್ಲಿದ ಚಿಂಚಣಿ ಮಠಕ್ಕೆ ಬಂದು ಜೀರ್ಣೋದ್ಧಾರ ಗೈದು ವಿಶಿಷ್ಟ ಸ್ವಾಮೀಜಿಗಳಾಗಿದ್ದಾರೆ.

"ಇವರ ೬೦ನೇ ಹುಟ್ಟುಹಬ್ಬದ ವಿಶೇಷ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿತ್ತು. ಗುರುಗಳು ತಮ್ಮ ಭಕ್ತರೊಡಗೂಡಿ ೭೫ ಕಿ.ಮೀ. ದೂರ ಕ್ರಮಿಸಿ ಜನರಲ್ಲಿ ಜಾಗೃತಿಯನ್ನು ಮೂಡಿಸಿದ್ದಲ್ಲದೇ ವೀರಶೈವಧರ್ಮ ಪ್ರಸಾರ ಮಾಡುತ್ತಾ ರಾಷ್ಟ್ರೀಯ ಭಾವೈಕ್ಯತೆಯಿಂದ ಮಾನವಿಕ ಮೌಲ್ಯಗಳನ್ನು ಎತ್ತಿಹಿಡಿಯಬಹುದೆಂದು

ಜನರಿಗೆ ತಿಳುವಳಿಕೆ ಕೊಟ್ಟು ಇತರೇ ಮಠಾಧೀಶರಿಗೆ ಮಾರ್ಗದರ್ಶಕರಾಗಿದ್ದಾರೆ. ಅಂದು ನಡೆಸಿದ ಧರ್ಮ ಜಾಗೃತಿ ಪಾದ ಯಾತ್ರೆಯು ಮಠದಲ್ಲಿ ಗುರುತಿಸಬಹುದಾದ ಸಾಧನೆಯಾಗಿದೆ"[೧೬]. ಈ ರೀತಿಯಾಗಿ ಸಿದ್ಧಪ್ರಭುಗಳು ಜನತೆಯಲ್ಲಿ ಧಾರ್ಮಿಕ ಜಾಗೃತಿಯನ್ನುಂಟುಮಾಡುತ್ತಾ ಸಮಾಜದಲ್ಲಿ ಮಾನವೀಯ ಮೌಲ್ಯಗಳನ್ನು ಪುನರ್‌ಸ್ಥಾಪಿಸಲು ಆದ್ಯತೆ ನೀಡಿದ್ದರು. ಹಲವಾರು ಜನರ ಸಹಾಯ ಮತ್ತು ಸಹಕಾರದಿಂದಾಗಿ ಮಠವನ್ನು ಆರ್ಥಿಕವಾಗಿ ಸಶಕ್ತಗೊಳಿಸುತ್ತ ಕಟ್ಟಡವನ್ನು ನವೀಕರಣಗೊಳಿಸಿದರು. ಸಿದ್ಧಪ್ರಭುಗಳು ಅಕಾಲಿಕವಾಗಿ ಲಿಂಗೈಕ್ಯರಾದರು.

ಇವರ ಉತ್ತರಾಧಿಕಾರಿಗಳಾಗಿ ಶ್ರೀ ಅಲ್ಲಮಪ್ರಭು ಸ್ವಾಮಿಗಳು (ಶಿರೋಳ) ೯ನೇ ಪೀಠಾಧಿಪತಿಗಳಾಗಿ ೧೯೯೪ ಜುಲೈ ೦೧ ರಂದು ಶ್ರೀಮಠದ ಅಧಿಕಾರವನ್ನು ಸ್ವೀಕರಿಸಿದರು. ಚಿಂಚಣಿ ಮಠವನ್ನು 'ಕನ್ನಡ ಮಠ'ವನ್ನಾಗಿ ಪರಿವರ್ತಿಸಿ ಧರ್ಮದೊಂದಿಗೆ ನಾಡಧರ್ಮವನ್ನು ಗಡಿಭಾಗದಲ್ಲಿ ಬೆಳಸುವ ಶಕ್ತಿಯಾಗಿ ಶ್ರೀಗಳು ನಿಂತಿದ್ದಾರೆ. ಕನ್ನಡದ ಗಡಿಯನ್ನು ಹಾಗೂ ನುಡಿಯನ್ನು ಕಾಯುವ ಸತ್ಕಾರ್ಯದಲ್ಲಿ ನಿತ್ಯನಿರಂತರವಾಗಿ ಮುಂದುವರೆಯುತ್ತಿದ್ದಾರೆ.

"ಸೋಹಂ ಎಂದರೆ ಅಂತರಂಗದ ಗರ್ವ, ಶಿವೋಹಂ ಎಂದೆ ಬಹಿರಂಗದ ಅಹಂಕಾರ, ಉಭಯವನ್ನಳಿದು ದಾಸೋಹಂ ಭಾವನೆ ಕರುಣಿಸಿ ಕರುಣಿಸಿ ಬದುಕಿಸಯ್ಯಾ ಅಖಂಡೇಶ್ವರ ಎಂಬ ಸಂದೇಶವು ಸಾರ್ವಕಾಲಿಕ ಮೌಲ್ಯವಾಗಿ ಪ್ರತಿಕ್ಷಣವೂ, ಪ್ರತಿಕ್ಷಣದಲ್ಲೂ ಸೃಷ್ಟಿಯ ಚರಾಚರ ಜೀವಿಗಳಿಗಾಗಿ ಅದರ ಅನುಪಾಲನೆ ಯಾದಾಗಲೇ ಗುರು-ಲಿಂಗ (ಸೃಷ್ಟಿ) ಜಂಗಮ (ಸಮಾಜ)ಕ್ಕೆ ಕ್ರಮವಾಗಿ ತನು ಮನ ಧನವನ್ನು ದಾಸೋಹಂ ಭಾವದಿಂದ ಅರ್ಪಿಸಿದಾಗಲೇ ಬಸವಾದಿ ಪ್ರಮಥರ ಆಶಯವನ್ನು ಈಡೇರಿಸಿದಂತಾಗುತ್ತದೆ"[೧೭] ಎಂಬುದನ್ನು ಅಲ್ಲಮಪ್ರಭು ಸ್ವಾಮಿಗಳು ಅರಿತುಕೊಂಡಿದ್ದಾರೆ. ಆದ್ದರಿಂದ ತಮ್ಮನ್ನು ಸಂಪೂರ್ಣವಾಗಿ ಕನ್ನಡ-ಕನ್ನಡಿಗ-ಕರ್ನಾಟಕ್ಕೆ ಅರ್ಪಿಸಿಕೊಂಡು ಬಸವಾದಿ ಪ್ರಮಥರ ದಾರಿಯಲ್ಲಿ ಮುಂದುವರೆದಿದ್ದಾರೆ. ಕನ್ನಡ ಕಾರ್ಯವೆಂದರೆ ಬಸವಣ್ಣನ ಕೆಲಸ ಎಂದು ನಂಬಿದ್ದಾರೆ.

ಕನ್ನಡಪರ ಯಾವದೇ ಹೋರಾಟದಲ್ಲಿ ಸ್ವಾಮಿಗಳು ಪಾಲ್ಗೊಂಡು ತಮ್ಮ ಕನ್ನಡಪರ ಕಾಳಜಿಯನ್ನು ತೋರಿಸುತ್ತಿದ್ದಾರೆ. ಇನ್ನುಳಿದ ಸ್ವಾಮಿಗಳಿಗೆ ಆದರ್ಶರಾಗುತ್ತಿದ್ದಾರೆ. ಕನ್ನಡ ರಾಜ್ಯೋತ್ಸವ ಆಚರಣೆ, ಗಡಿಕನ್ನಡಿಗರ ಬಳಗ, ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಬಾಳಿನಬುತ್ತಿ ಕಲಿಕಾ ಕೇಂದ್ರ, ಸಾಹಿತಿ ವಿದ್ವಾಂಸರ ಒಡನಾಟ, ದಾಖಲೆ-ನಾಣ್ಯಗಳ ಸಂಗ್ರಹ, ಕುಸುರಿ ಕೆಲಸ, ಪುಸ್ತಕಸಂಗ್ರಹ ಇನ್ನೂ ಮುಂತಾದ ಹತ್ತುಹಲವಾರು ಕನ್ನಡಪರವಾದ ವಿನೂತನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ಚಿಂಚಣಿ ಗ್ರಾಮವನ್ನು ಕರ್ನಾಟಕ ಭೂಪಟದಲ್ಲಿ ವಿರಾಜಮಾನಗೊಳಿಸುತ್ತಿದ್ದಾರೆ. ಈ ಎಲ್ಲ ಕಾರ್ಯಗಳು ಅಲ್ಲಮಪ್ರಭು ಸ್ವಾಮಿಗಳ

ಕನ್ನಡ ಕಳಕಳಿ ಮತ್ತು ಪ್ರೀತಿಗೆ ಹಿಡಿದ ಕನ್ನಡಿಯಾಗಿದೆ. ಇಂತಹ ಕನ್ನಡಸ್ವಾಮೀಜಿಯ ಕನ್ನಡಪರ ಕಾರ್ಯಗಳು ಯಾವುವು? ಎಂಬುದನ್ನು ಮುಂದಿನ ಅಧ್ಯಾಯಗಳಲ್ಲಿ ಸ್ಥೂಲವಾಗಿ ಗಮನಿಸಬಹುದು.

**ಅಡಿ ಟಿಪ್ಪಣಿಗಳು:**

೧. ದಾಸೋಹ-ಸಂ. ರಾಮಕೃಷ್ಣ ಮರಾಠೆ, ಪು.೧೭೬

೨. ಕರ್ನಾಟಕ ಮಠಗಳು ಮತ್ತು ಕನ್ನಡ ಸಾಹಿತ್ಯ – ಕೆ. ರವೀಂದ್ರನಾಥ, ಪು.೩೭

೩. ಅದೇ ಪು. ೪೪

೪. ವೀರಶೈವ ಅಧ್ಯಯನ ಸಂಸ್ಥೆ – ಜಿ.ಎಂ. ಹೆಗಡೆ, ಪು. ೭೭-೭೯

೫. ಕನ್ನಡಪರ ಚಿಂತಣೆ ಮತ್ತು ಪರಂಪರೆ – ಕಾ.ವೆಂ. ಶ್ರೀನಿವಾಸಮೂರ್ತಿ, ಪು. ೧೯೪

೬. ಅದೇ ಪು. ೧೯೭ ೭. ಅದೇ ಪು. ೧೯೭

೮. ಸೀಮೆ – ಸಂ. ಚಂದ್ರಕಾಂತ ಪೋಕಳೆ, ಡಾ: ಅನಿಲ ಕಮತೆ, ಪು. ೭೬

೯. ಅರ್ಚನ – ಜಿ.ಎಸ್. ಶಿವರುದ್ರಪ್ಪ, ಪು. ೧೦೦೫

೧೦. ಸಿದ್ಧಗಂಗಾ ಶ್ರೀ – ಎಚ್.ಎಂ. ಸದಾಶಿವಯ್ಯಾ, ಪು. ೫೫೬

೧೧. ಸಮಗ್ರ ವಚನ ಸಂಪುಟ (೭)- ಎಸ್. ವಿದ್ಯಾಶಂಕರ, ಪು. ೨೬೬

೧೨. ಚಿಂಚಣಿ ಪ್ರಭುದೇವಮಠದ ಪರಿಚಯ ಗ್ರಂಥ – ನೀಲಕಂಠ ಸ್ವಾಮಿಗಳು, ಪು. ೧

೧೩. ಅದೇ ಪು. ೨ ೧೪. ಅದೇ ಪು. ೨

೧೫. ಕಲ್ಯಾಣದ ಹಾದಿ – ಸಂ. ಡಾ: ಸಿದ್ಧಲಿಂಗ ಪಟ್ಟಣಶೆಟ್ಟಿ, ಪು. ೨೯೨

೧೬. ಕರ್ನಾಟಕದ ವೀರಶೈವ ಮಠಗಳು – ಚಂದ್ರಶೇಖರ ನಾಗಣಾಪೂರ, ಪು. ೮೪೯

೧೭. ದಾಸೋಹ – ಸಂ. ರಾಮಕೃಷ್ಣ ಮರಾಠೆ, ಪು. ೨೪೪

ಅಧ್ಯಾಯ ೩

## ಅಲ್ಲಮಪ್ರಭು ಸ್ವಾಮಿಗಳು – ಕನ್ನಡಕಾರ್ಯ

"ಗಡಿಭಾಗ ಎಂದಾಕ್ಷಣ ನೆನಪಿಗೆ ಬರುವುದು ಚಿಕ್ಕೋಡಿ ತಾಲೂಕಿನ ಚಿಂಚಣಿ ಗ್ರಾಮದ ಅಲ್ಲಮಪ್ರಭು ಮಠ. ಈಗಿನ ಪೀಠಾಧಿಪತಿಗಳಾದ ಶ್ರೀ ಅಲ್ಲಮಪ್ರಭು ಸ್ವಾಮಿಗಳು ಕನ್ನಡ ಜಾಗೃತಿ ಮಾಲೆಯನ್ನು ಸ್ಥಾಪಿಸಿದ್ದಾರೆ. ತನ್ಮೂಲಕ ಕನ್ನಡ ನಾಡು-ನುಡಿ, ಪರಂಪರೆಗಳನ್ನು ಕುರಿತಾದ ಅತ್ಯುತ್ತಮ ಗ್ರಂಥಗಳನ್ನು ಪ್ರಕಟಿಸಿ ಅಲ್ಪಾವಧಿಯಲ್ಲಿ ನಾಡಿನ ತುಂಬ ಚಿರಪರಿಚಿತವಾಗಿದೆ"[೧]. ಈ ರೀತಿಯಾಗಿ ಅಲ್ಪಾವಧಿಯಲ್ಲಿಯೇ ಚಿಂಚಣಿಯ ಸಿದ್ಧಸಂಸ್ಥಾನಮಠವು ನಾಡಿನ ಉದ್ದಗಲಕ್ಕೂ ಚಿರಪರಿಚಿತವಾಗಲು ಈಗಿನ ಪೀಠಾಧಿಪತಿಗಳೇ ಕಾರಣ. ತಮ್ಮ ಅದಮ್ಯವಾದ ಕನ್ನಡದ ಪ್ರೀತಿಯಿಂದಾಗಿ 'ಕನ್ನಡದ ಸ್ವಾಮೀಜಿ' ಎಂಬ ಅನ್ವರ್ಥಕ ನಾಮದಿಂದಾಗಿ ಅಲ್ಲಮಪ್ರಭು ಸ್ವಾಮಿಗಳು ಹೆಸರುವಾಸಿಯಾಗಿದ್ದಾರೆ.

ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯನ್ನು ರಾಜಪ್ರಭುತ್ವ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ರಾಜ ಮಹಾರಾಜರು ರಕ್ಷಿಸಿದ್ದಾರೆ. ನಮ್ಮ ಅನೇಕ ಕವಿಗಳು, ಕಲಾವಿದರು ರಾಜನ ಆಶ್ರಯ ಪಡೆದು ಸಾಹಿತ್ಯ ಮತ್ತು ಸಂಗೀತದಲ್ಲಿ ಸಾಧನೆ ಮಾಡಿದ್ದಾರೆ. ಆದರೆ ವಚನಕಾರರು ಈ ವಿಚಾರದಲ್ಲಿ ರಾಜಪ್ರಭುತ್ವವನ್ನು ನಚ್ಚಲಿಲ್ಲ, ನಂಬಲಿಲ್ಲ. ಹೀಗೆ ೧೨ನೇ ಶತಮಾನದ ನಂತರ ವೀರಶೈವ ಕವಿ ಕಲಾವಿದರು ಮಠಗಳ ಸಂಬಂಧದಲ್ಲಿ ಸಂಸ್ಕೃತಿ ಮತ್ತು ಸಾಹಿತ್ಯದ ಕೆಲಸ ಮಾಡಿದರು. ಅನೇಕ ಮಠಗಳು ಇಂಥ ಕೆಲಸಕ್ಕೆ ಆಶ್ರಯ ಒದಗಿಸಿವೆ. ಹಿಂದೆ ಮತ್ತು ಈಗ ಅನೇಕ ಮಠಾಧೀಶರು ನಿರಂತರವಾಗಿ ಸಾಹಿತ್ಯವನ್ನು ರಕ್ಷಿಸುತ್ತ ಬಂದಿದ್ದಾರೆ. ಕವಿಗಳಿಗೆ ಆಶ್ರಯ ನೀಡುವುದರೊಂದಿಗೆ ಸಾಹಿತ್ಯ ಸೃಷ್ಟಿಗೆ ಕಾರಣರಾಗಿದ್ದಾರೆ.

ವಚನಸಾಹಿತ್ಯ ಸೃಷ್ಟಿಯ ನಂತರ ೧೫ನೇ ಶತಮನದಲ್ಲಿ ನೂರೊಂದು ವಿರಕ್ತರಿಂದ ಹಾಗೂ ಅಂದಿನ ಮಠಾಧೀಶರಿಂದ ಸಾಹಿತ್ಯ ಸೃಷ್ಟಿಯ ಜೊತೆಗೆ ಸಂಕಲನದ ಕಾರ್ಯಗಳು ನಡೆದವು. "ತೋಂಟದ ಅಲ್ಲಮನೆಂಬ ಅಭಿನಾಮದಿಂದ ಖ್ಯಾತರಾಗಿದ್ದ ತೋಂಟದ ಸಿದ್ಧಲಿಂಗಯತಿಗಳು ಹಾಗೂ ಅವರ ಶಿಷ್ಯ ಪರಂಪರೆ"[೨]ಯು ಕನ್ನಡ ಸಾಹಿತ್ಯ ಪರಂಪರೆಯನ್ನು ಮುಂದುವರೆಸಲು ಹಾಗೂ ವಚನಸಾಹಿತ್ಯದ ಮರುಸೃಷ್ಟಿಗೆ ಕಾರಣರಾದರು. "ಗದುಗಿನ ತೋಂಟದಾರ್ಯಮಠದ ಇಂದಿನ ಪೀಠಾಧಿಪತಿಗಳಾದ ಜ.ಡಾ. ಸಿದ್ದಲಿಂಗ ಮಹಾಸ್ವಾಮಿಗಳು ಅಧಿಕಾರ ವಹಿಸಿಕೊಂಡ ಮೇಲೆ ಇಡೀ ನಾಡಿಗೆ ಮಾದರಿಯಾಗುವ ಕೆಲಸಗಳನ್ನು ಮಾಡುತ್ತ ಮುನ್ನಡೆದಿದ್ದಾರೆ"[೩]. ಇವರು ಅಲ್ಲಮಪ್ರಭು ಸಂಪ್ರದಾಯದ ಸದ್ಯದ ಜಗದ್ಗುರುಗಳಾಗಿದ್ದಾರೆ. ಡಾ. ಸಿದ್ದಲಿಂಗ ಸ್ವಾಮಿಗಳು ಕನ್ನಡ ನಾಡು-ನುಡಿಗೆ ಸಲ್ಲಿಸಿದೆ

ಸೇವೆ ನಾಡಿನ ವಿದ್ವಜ್ಜನರ, ಕವಿಗಳ, ಸಾಹಿತಿಗಳ ಗಮನವನ್ನು ಸೆಳೆದಿದೆ. ಈ ಎಲ್ಲ ಕನ್ನಡಪರ ಕಾರ್ಯಗಳಿಂದಾಗಿ 'ಕನ್ನಡ ಜಗದ್ಗುರು' ಎಂಬ ಅಭಿನಾಮದಿಂದ ಪ್ರಸಿದ್ಧರಾಗಿದ್ದಾರೆ. ಇಂಥ 'ಕನ್ನಡ ಜಗದ್ಗುರು'ಗಳ ಗರಡಿಯಲ್ಲಿ ಬೆಳೆದ 'ಕನ್ನಡ ಸ್ವಾಮೀಜಿ' ಚಿಂಚಣಿ ಸಿದ್ಧಸಂಸ್ಥಾನ ಮಠದ ಶ್ರೀ ಅಲ್ಲಮಪ್ರಭು ಮಹಾಸ್ವಾಮಿಗಳು.

ಕನ್ನಡ ನಾಡು ಸಾಧುಸಂತರ ಪುಣ್ಯಧಾಮ. ಋಷಿಮುನಿಗಳ ತಪೋಭೂಮಿಯಾಗಿದೆ. ಹಿಂದಿನಿಂದಲೂ ಮಹಾತ್ಮರು ಈ ನಾಡಿನಲ್ಲಿ ಜನಿಸಿ ತಮ್ಮ ಅನನ್ಯ ಕಾರ್ಯದಿಂದ ಜನಮನ ಗೆದ್ದಿದ್ದಾರೆ. ಮಠಮಾನ್ಯಗಳು ಮಹಾಸ್ವಾಮಿಗಳ ಸಾರಥ್ಯದಲ್ಲಿ ಕನ್ನಡ ಡಿಂಡಿಮವನ್ನು ಮೊಳಗಿಸುತ್ತಿವೆ; ನಾಡು-ನುಡಿಯ ಹೊನ್ನ ತೇರನ್ನು ನಿರಂತರವಾಗಿ ಎಳೆಯುತ್ತಿವೆ. ತಮ್ಮ ಜೀವನವನ್ನು ಸಂಪೂರ್ಣವಾಗಿ ಸಮಾಜಕ್ಕೆ ಮೀಸಲಾಗಿಟ್ಟಿದ್ದಾರೆ. ವೈಯಕ್ತಿಕ ಬದುಕಿನಲ್ಲಿ ವಿರಕ್ತಿ ಹೊಂದಿದ್ದಾರೆ. ವ್ಯಷ್ಟಿಗಿಂತ ಸಮಷ್ಟಿಹಿತವೇ ಲೇಸೆಂದು ತಿಳಿದವರು ಮಹಾತ್ಮರಾಗುತ್ತಾರೆ, ಪೂಜ್ಯರಾಗುತ್ತಾರೆ.

ಗಡಿಭಾಗದ ಚಿಕ್ಕೋಡಿ ತಾಲೂಕಿನ ಕೇಂದ್ರದಿಂದ ೬ ಕಿ.ಮೀ. ದೂರವಿರುವ ಚಿಂಚಣಿ ನಾಡಿಗೆಲ್ಲ ಚಿರಪರಿಚಿತವಾಗಿದೆ. ಇದಕ್ಕೆ ಕಾರಣ ಅಲ್ಲಮಪ್ರಭು ಮಠದ ಸದ್ಯದ ಪೀಠಾಧಿಪತಿಗಳು. ಒಂದು ದಶಕಗಳ ಕಾಲ ಗಡಿಯಲ್ಲಿ ನುಡಿಜಾಗೃತಿಯನ್ನು ಮೂಡಿಸುತ್ತಿದ್ದಾರೆ. ತಮ್ಮ ಸಕಲ ಬದುಕನ್ನೇ ನಾಡು-ನುಡಿಯ ಉನ್ನತಿಗಾಗಿ ಮೀಸಲಿಟ್ಟಿದ್ದಾರೆ. ಅವರ ಬದುಕಿನ ಸಾಮಾನ್ಯವಾದ ಪರಿಚಯ ನಮಗೆಲ್ಲ ಅವಶ್ಯವಾಗಿದೆ.

ಗದಗ ಜಿಲ್ಲೆಯ ಗಜೇಂದ್ರಗಡದ ಹಿರೇಮಠದ ದಂಪತಿಗಳಾದ ಗುರುಲಿಂಗಯ್ಯಾ ಮತ್ತು ಬಸಮ್ಮ ಅವರ ಪುಣ್ಯಗರ್ಭದಲ್ಲಿ ಅಲ್ಲಮಪ್ರಭು ಸ್ವಾಮಿಗಳು ೧೨ನೇ ಜೂನ ೧೯೬೨ ರಂದು ಜನ್ಮತಾಳಿದರು. ಇವರ ಪೂರ್ವಾಶ್ರಮದ ಹೆಸರು ಶಂಕರಯ್ಯಾ. ತಮ್ಮ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವನ್ನು ಸ್ವಗ್ರಾಮದಲ್ಲಿಯೇ ಮುಗಿಸಿದರು. ಅಣ್ಣನ ವೈದಿಕ ಕಾರ್ಯಗಳಿಗೆ ಸಹಾಯ ಮಾಡಲೋಸುಗ ಸಮೀಪವಿರುವ ಗದುಗಿನ ತೋಂಟದಾರ್ಯ ಮಠದ ವೈದಿಕ ಶಾಲೆಗೆ ಸೇರಿದರು. ಅಲ್ಲಿ ವೈದಿಕ ವಿಧಿವಿಧಾನಗಳನ್ನು ಅಭ್ಯಸಿಸಿದರು. ತೋಂಟದಾರ್ಯ ಮಠದಲ್ಲಿ ಸ್ವಾಮಿಗಳ ಸಾಮಿಪ್ಯದಲ್ಲಿ ಅಧ್ಯಯನಗೈಯ್ಯುತ್ತಿರುವಾಗ ನಡೆದ ಒಂದು ಘಟನೆಯೇ ಶಂಕರಯ್ಯಾ ಅವರು ಅಲ್ಲಮಪ್ರಭುಗಳಾಗಲು ಕಾರಣವಾಯಿತು. ಒಂದು ದಿನ ಗುದುಗಿನ ತೋಂಟದ ಸಿದ್ಧಲಿಂಗಸ್ವಾಮಿಗಳು ದಿನಪತ್ರಿಕೆಯೊಂದನ್ನು ಓದುತ್ತಿದ್ದರು. ಅದರಲ್ಲಿ ಗಜೇಂದ್ರಗಡದ ಓರ್ವ ಜೈನ ಹುಡುಗಿ ಜೈನ ದೀಕ್ಷೆಯನ್ನು ಪಡೆದುಕೊಂಡ ವಿಷಯ ಪ್ರಕಟವಾಗಿತ್ತು. ಆ ವಿಷಯವನ್ನು ಜಗದ್ಗುರುಗಳು ಶಂಕರಯ್ಯನನ್ನು ಕರೆದು "ಒಬ್ಬ ಜೈನ ಹುಡುಗಿ ಜೈನ ಸನ್ಯಾಸ ಸ್ವೀಕರಿಸಿ ದೀಕ್ಷೆಯನ್ನು ಪಡೆದುಕೊಂಡಿದ್ದಾಳೆ.

ಮನಿ ಉದ್ಧಾರ ಮಾಡುವುದಕ್ಕಿಂತ ಸಮಾಜ ಉದ್ಧಾರ ಮಾಡಬೇಕು. ಈ ಹುಡುಗಿಯ ಹಾಗೆ ನೀನೇಕೆ ಸನ್ಯಾಸ ಸ್ವೀಕರಿಸಬಾರದು" ಎಂದು ಸಹಜವಾಗಿ ಕೇಳಿದರು. ಈ ಮಾತುಗಳನ್ನು ಜಗದ್ಗುರುಗಳು ಸಮಾನ್ಯವೆಂಬಂತೆ ಆಡಿದ್ದರೂ ಅವು ತರುಣನಾಗಿದ್ದ ಶಂಕರಯ್ಯನ ಮೇಲೆ ಆಳವಾದ ಪ್ರಭಾವ ಬೀರಿದವು. ಇದರಿಂದ ಚಿಂತನೆಗೆ ತೊಡಗಿದರು. ಅಂದಿನಿಂದ ಶಂಕರಯ್ಯನವರ ನಡೆ-ನುಡಿಯೇ ಬದಲಾಯಿತು. ಸಾಮಾನ್ಯರೊಂದಿಗೆ ಸರಳವಾಗಿ ಬೆರೆಯುತ್ತಿದ್ದ ಶಂಕರಯ್ಯನವರು ನಿಧಾನವಾಗಿ ಅಂತರ್ಮುಖಿಗಳಾದರು. ಜಗದ್ಗುರುಗಳ ಕತೃತ್ವಶಕ್ತಿಗೆ ಮಾರುಹೋಗಿ ಶಂಕರಯ್ಯನವರು ಸನ್ಯಾಸವನ್ನು ಸ್ವೀಕರಿಸಲು ನಿರ್ಧಾರಮಾಡಿದರು. ಈ ವಿಷಯವನ್ನು ಜಗದ್ಗುರುಗಳ ಮುಂದೆ ಪ್ರಸ್ತಾಪಿಸಿದರು.

ಬಹುದಿನಗಳಿಂದ ತೆರವಾಗಿದ್ದ ಶಿರೋಳದ ಶಾಖಾಮಠಕ್ಕೆ ಶಂಕರಯ್ಯನವರನ್ನು ಶಂಕರ ದೇವರನ್ನಾಗಿ ರೂಪಿಸಿ ಕಳುಹಿಸಿಕೊಟ್ಟರು. ಶಿರೋಳ ಮಠವನ್ನು ಶಂಕರದೇವರು ಹಂತ ಹಂತವಾಗಿ ಭಕ್ತರ ನೆರವಿನಿಂದ ಉನ್ನತಗೊಳಿಸಿದರು. ಶಂಕರದೇವರ ಆಗಮನದಿಂದಾಗಿ ಗುರುವಿಲ್ಲದ ಮಠವಾಗಿದ್ದ ಶಿರೋಳ ಮಠವು ಹೊಸ ಕಳೆಯನ್ನು, ತೇಜಸ್ಸನ್ನು ಪಡೆದುಕೊಂಡು ಅಭಿವೃದ್ಧಿ ಪಥದತ್ತ ಮುನ್ನಡೆಯಿತು. ಕೆಲವು ದಿನಗಳ ನಂತರ ಶಂಕರದೇವರು ಶಿರೋಳ ಮಠದ ಪೀಠವನ್ನೇರಿ ಮನುಜಪ್ರೀತಿಯ 'ಗುರುಬಸವ ಸ್ವಾಮಿಗಳು' ಎಂಬ ಅಭಿದಾನವನ್ನು ಪಡೆದು ಪೀಠಾಧಿಕಾರವನ್ನು ವಹಿಸಿಕೊಂಡರು. ಇಲ್ಲಿಂದ ಅವರ ಧಾರ್ಮಿಕ, ಸಾಮಾಜಿಕ ಸೇವೆ ಪ್ರಾರಂಭವಾಯಿತು.

ಶಿರೋಳದಲ್ಲಿ ಗುರುಬಸವ ಪ್ರೌಢಶಾಲೆ, ಉಚಿತ ಪ್ರಸಾದ ನಿಲಯ ಮತ್ತು ತೋಂಟದಾರ್ಯ ಪೀಠದ ಮಾದಾರಚೆನ್ನಯ್ಯ ಕೈಗಾರಿಕಾ ತರಬೇತಿ ಕೇಂದ್ರವನ್ನು ಪ್ರಾರಂಭಿಸಿದರು. ಇದರ ಮೂಲಕ ಗ್ರಾಮೀಣ ಭಾಗದಲ್ಲಿ ಶಿಕ್ಷಣ ಹಾಗೂ ಉದ್ಯೋಗ ಸೃಷ್ಟಿಗೆ ಪ್ರಾಧಾನ್ಯತೆಯನ್ನು ನೀಡಿದರು. ಶಿರೋಳ ಮಠದ ಜಾತ್ರೆಯಲ್ಲಿ ಜನಪರ ಕಾರ್ಯಕ್ರಮಗಳನ್ನು ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುತ್ತ ಜಗದ್ಗುರುಗಳು ಹಾಕಿಕೊಟ್ಟ ಮಾರ್ಗದಲ್ಲಿ ಮುನ್ನಡೆದರು. ಮೊದಲಿನಿಂದಲೂ ನಡೆದುಕೊಂಡು ಬಂದ ಶಿರೋಳ ಮಠದ ಜಾತ್ರೆಯನ್ನು ರೊಟ್ಟಿಜಾತ್ರೆಯನ್ನಾಗಿ ಪ್ರಸಿದ್ಧಿಗೊಳಿಸಿದರು. ಉತ್ಸವಗಳಿಗೆ ವಿಶೇಷವಾಗಿ ರೊಟ್ಟಿ ಜಾತ್ರೆಗೆ ಶಿರೋಶ ಮಠವು ಪ್ರಸಿದ್ಧವಾಗತೊಡಗಿತು. ಅವುಗಳನ್ನು ಉಳಿಸಿಕೊಂಡು ಹೊಸದಾಗಿ ಸಮಾಜಮುಖಿ ಚಿಂತನೆಯನ್ನು ರೂಪಿಸಿಕೊಂಡು ಗುರುಬಸವ ಸ್ವಾಮಿಗಳು ಉತ್ಸಾಹದಿಂದ ಸೇವೆಗೆ ಅಣಿಯಾದರು. ಶಿರೋಳ ಮಠವನ್ನು ಕೋಮುಸೌಹಾರ್ದತೆಯ ಸ್ಥಳವನ್ನಾಗಿ ರೂಪಿಸಿ ಭಕ್ತರ ಮೆಚ್ಚುಗೆಗೆ ಪಾತ್ರರಾಗಿದ್ದರು. ಇದೇ ಹೊತ್ತಿಗೆ ಚಿಂಚಣಿ ಮಠಕ್ಕೆ ಗುರುಗಳು ಇರಲಿಲ್ಲ. ಪೂಜ್ಯ ಸಿದ್ಧಪ್ರಭು ಸ್ವಾಮಿಗಳು ಅಕಾಲಿಕವಾಗಿ ಲಿಂಗೈಕ್ಯರಾಗಿದ್ದರು.

ಇಂಥ ಸಂದರ್ಭದಲ್ಲಿ ಗಡಿಜಿಲ್ಲೆ ಬೆಳಗಾವಿಯ ಚಿಕ್ಕೋಡಿ ತಾಲೂಕಿನ ಚಿಂಚಣಿಯ ಜನತೆಯ ದೃಷ್ಟಿ ಗುರುಬಸವ ಸ್ವಾಮಿಗಳ ಮೇಲೆ ಹರಿಯಿತು. ಕೆಲವೇ ದಿನಗಳಲ್ಲಿ ಶ್ರೀಗಳು ಮಾಡಿದ ಸಾಧನೆಯನ್ನು ಅರಿತುಕೊಂಡ ಚಿಂಚಣಿಯ ಭಕ್ತರು ಗುರುಬಸವ ಮಹಾಸ್ವಾಮಿಗಳನ್ನು ಚಿಂಚಣಿಯ ಸಿದ್ಧಸಂಸ್ಥಾನಮಠಕ್ಕೆ ಕರೆತಂದರು. ಗುರುಬಸವಸ್ವಾಮಿಗಳು ಶಿರೋಳದಿಂದ ಚಿಂಚಣಿಗೆ ಬರಲು ನಿಡಸೋಸಿಯ ಪಂಚಮ ಶ್ರೀ ಶಿವಲಿಂಗೇಶ್ವರ ಸ್ವಾಮಿಗಳು ಮತ್ತು ಬೆಳಗಾವಿ ನಾಗನೂರು ರುದ್ರಾಕ್ಷಿಮಠದ ಶ್ರೀ ಸಿದ್ಧರಾಮಸ್ವಾಮಿಗಳು ಪ್ರಮುಖ ಪಾತ್ರವನ್ನು ವಹಿಸಿದರು. ಇದನ್ನು ಶಿರೋಳದ ಜನರು ಬಲವಾಗಿ ವಿರೋಧಿಸಿದರು. ಆಗ ಗದುಗಿನ ಜಗದ್ಗುರುಗಳು ಮಧ್ಯ ಪ್ರವೇಶಿಸಿ "ಗುರುಬಸವ ಮಹಾಸ್ವಾಮಿಗಳು ಚಿಂಚಣಿ ಮಠದ ಪೀಠಾಧಿಪತಿಗಳಾದರೂ ನಿಮ್ಮ ಊರಿನ ಮಠವನ್ನು ಬಿಡುವುದಿಲ್ಲ. ಎರಡೂ ಮಠಗಳ ಅಧಿಕಾರವನ್ನು ಅವರೇ ನೋಡಿಕೊಳ್ಳುತ್ತಾರೆ" ಎಂದು ಶಿರೋಳ ಗ್ರಾಮದ ಜನರಿಗೆ ತಿಳಿಹೇಳಿದರು. ಅಂದಿನಿಂದ ಗುರುಬಸವಸ್ವಾಮಿಗಳು ಎರಡೂ ಮಠದ ಪೀಠಾದಿಪತಿಗಳಾಗಿ ಕಾರ್ಯವನ್ನು ಸರ್ವ ಸಮರ್ಪಕವಾಗಿ ನಿಭಾಯಿಸುತ್ತಿದ್ದಾರೆ. ೧೯೯೪ಳ ಜುಲೈ ೧ ರಂದು ಚಿಂಚಣಿಯ ಸಿದ್ಧಸಂಸ್ಥಾನ ಮಠದ ಪೀಠಾಧಿಕಾರವನ್ನು ವಹಿಸಿಕೊಂಡು ಅಲ್ಲಮಪ್ರಭು ಸ್ವಾಮಿಗಳಾಗಿ ನಾಡು-ನುಡಿ ಕೈಂಕರ್ಯವನ್ನು ಅವಿಶ್ರಾಂತವಾಗಿ ಮಾಡುತ್ತಿದ್ದಾರೆ.

ಈ ಮಠಗಳ ಮಧ್ಯೆ ತಮ್ಮ ಪೂರ್ವಾಶ್ರಮದ ಗಜೇಂದ್ರಗಡವನ್ನು ಶ್ರೀಗಳು ಮರೆಯಲಿಲ್ಲ. ತಮ್ಮ ಪಾಲಿನ ಒಂದು ಎಕರೆ ಭೂಮಿಯನ್ನು ಪಡೆದುಕೊಂಡು ತೋಂಟದಾರ್ಯ ವಿದ್ಯಾಪೀಠದ ಪೂರ್ವ ಪ್ರಾಥಮಿಕ, ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳನ್ನು ಆರಂಭಿಸಿದರು. ಈ ವಿದ್ಯಾಲಯವು ಇಂದು ೬೫೦ ಮಕ್ಕಳು ವಿದ್ಯಾಭ್ಯಾಸ ಮಾಡುವ ಉತ್ತಮ ಸಂಸ್ಥೆಯಾಗಿ ರೂಪುಗೊಂಡಿದೆ.

ಗದುಗಿನ ಜ.ಡಾ. ಸಿದ್ಧಲಿಂಗ ಮಹಾಸ್ವಾಮಿಗಳ ಸನಿಹದಲ್ಲಿರುವಾಗಲೇ ಹಲವಾರು ಸಾಹಿತಿ-ವಿದ್ವಾಂಸರುಗಳ ಒಡನಾಟ ಸಹಜವಾಗಿಯೇ ಶ್ರೀಗಳಿಗೆ ಇತ್ತು. ಗದುಗಿನ ಮಠದಲ್ಲಿ ನಡೆಯುವ ಸಾಹಿತ್ಯಿಕ, ಸಾಂಸ್ಕೃತಿಕ ಕಾರ್ಯಕ್ರಮಗಳು ಮತ್ತು ಗದುಗಿನ ಶ್ರೀಗಳು ಪಾಲ್ಗೊಳ್ಳುವ ಹೋರಾಟಗಳು ಅಲ್ಲಮಪ್ರಭು ಸ್ವಾಮಿಗಳ ಮೇಲೆ ಪ್ರಭಾವ ಬೀರಿದ್ದವು. ಗದುಗಿನ ಲಿಂಗಾಯತ ಅಧ್ಯಯನ ಸಂಸ್ಥೆಯ ವಿವಿಧ ಗ್ರಂಥಮಾಲೆ ಹಾಗೂ ಇನ್ನುಳಿದ ಮಾಲೆಗಳಲ್ಲಿ ಪ್ರಕಟಗೊಂಡಿರುವ ಪುಸ್ತಕಗಳು ಸ್ವಾಮಿಗಳ ಮನವನ್ನು ತುಂಬಿಕೊಂಡಿದ್ದವು. ನಾಣ್ಯಗಳ ಸಂಗ್ರಹ ಮಾಡುವಂತೆ ಗದುಗಿನ ಜಗದ್ಗುರುಗಳು ಅಲ್ಲಮಪ್ರಭು ಸ್ವಾಮಿಗಳಿಗೆ ಪ್ರೇರಣೆ ನೀಡಿದರು. ಈ ಎಲ್ಲ ರೀತಿಯ ಕಾರ್ಯಗಳನ್ನು ಕಣ್ಣಾರೆ ಕಂಡ ಅಲ್ಲಮಪ್ರಭು ಸ್ವಾಮಿಗಳು ಚಿಂಚಣಿಯಲ್ಲಿ ಹೊಸ ಹೊಸ ಸಮಾಜೋಧಾರ್ಮಿಕ ಕಾರ್ಯಗಳನ್ನು ಪ್ರಾರಂಭಿಸಿದರು. ಗಡಿಮಠಕ್ಕೆ ಬರುವಾಗ ಗದುಗಿನ ಜಗದ್ಗುರುಗಳು "ಚಿಂಚಣಿ ಮಠಕ್ಕೆ ಹೊರಟ್ಟಿದ್ದೀರಿ, ಕನ್ನಡದ

ಪರಿಸ್ಥಿತಿ ಗಡಿಭಾಗದಲ್ಲಿ ಸರಿಯಾಗಿಲ್ಲ. ಈಗಾಗಲೆ ಲಿಂಗಾಯತಮಠಗಳು ಸಾಕಷ್ಟು ಸಾಮಾಜಿಕ, ಧಾರ್ಮಿಕ ಕಾರ್ಯವನ್ನು ಮಾಡಿವೆ. ಆದರೆ ಗಡಿಭಾಗದಲ್ಲಿ ಕನ್ನಡಪರ ಕಾರ್ಯಗಳು ಇಂದು ಬಹಳಷ್ಟು ಕಡಿಮೆಯಾಗಿವೆ. ಆದ್ದರಿಂದ ತಾವುಗಳು ಕನ್ನಡಪರ ಕಾರ್ಯಕ್ರಮಗಳನ್ನು ಹೆಚ್ಚಾಗಿ ಮಾಡಬೇಕು. ಕನ್ನಡದ ನುಡಿಯನ್ನು ಗಡಿಯಲ್ಲಿ ಮಾರ್ಧನಿಗೊಳಿಸಬೇಕು"ಎಂದು ಅಲ್ಲಮಪ್ರಭುಸ್ವಾಮಿಗಳಿಗೆ ಕನ್ನಡದ ದೀಕ್ಷೆಯನ್ನು ನೀಡಿದರು. ಜ.ಡಾ. ಸಿದ್ಧಲಿಂಗ ಸ್ವಾಮಿಗಳ ಆಶಯದಂತೆ ಅಲ್ಲಮಪ್ರಭು ಸ್ವಾಮಿಗಳು 'ಕನ್ನಡದ ಸ್ವಾಮೀಜಿ'ಗಳಾಗಿ ಜನಮನ ಗೆದ್ದಿದ್ದಾರೆ.

ಗಡಿಭಾಗದಲ್ಲಿ ನಡೆಯುವ ಎಲ್ಲ ಕನ್ನಡಪರ ಕಾರ್ಯಕ್ರಮಗಳಲ್ಲಿ ಮತ್ತು ಹೋರಾಟಗಳಲ್ಲಿ ಚಿಂಚಣಿಯ ಶ್ರೀಗಳು ಸಕ್ರೀಯವಾಗಿ ಪಾಲ್ಗೊಳ್ಳುತ್ತಾರೆ. ಗಡಿ ಕನ್ನಡಿಗರ ಬಳಗ ಕಟ್ಟಿಕೊಂಡು ಕಳೆದ ಒಂದು ದಶಕಗಳಿಂದ ರಾಜ್ಯೋತ್ಸವವನ್ನು ಬಹು ಅರ್ಥಪೂರ್ಣವಾಗಿ ಆಚರಿಸುತ್ತಾ ಬಂದಿದ್ದಾರೆ. ನಾಡು-ನುಡಿಪರವಾದ ಚಿಂತನೆಗಳನ್ನು ಜನತೆಗೆ ತಲುಪಿಸಲು ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆಯೊಂದನ್ನು ಕಟ್ಟಿಕೊಂಡಿದ್ದಾರೆ. ಇದರ ಮೂಲಕ 'ಕನ್ನಡ ಜಾಗೃತಿ ಪುಸ್ತಕಮಾಲೆ'ಯಲ್ಲಿ ಇದುವರೆಗೆ ೨೩ ಕನ್ನಡಪರ ಚಿಂತನೆಗಳನ್ನೊಳಗೊಂಡ ಮೌಲಿಕ ಕೃತಿಗಳನ್ನು ಪ್ರಕಾಶನಗೊಳಿಸಿದ್ದಾರೆ. ಬಾಳಿನಬುತ್ತಿ ಕಲಿಕಾಕೇಂದ್ರವನ್ನು ಆರಂಭಿಸಿ ಮಕ್ಕಳಲ್ಲಿ ಕನ್ನಡ ಪ್ರೀತಿಯನ್ನು ತುಂಬುವುದರೊಂದಿಗೆ ಬಡಮಕ್ಕಳಿಗೆ ಆಶ್ರಯವನ್ನು ನೀಡಿದ್ದಾರೆ. ಕವಿ-ಸಾಹಿತಿಗಳಿಗೆ ಪುಸ್ತಕ ಪ್ರಕಟಣೆಗಾಗಿ ಧನಸಹಾಯ ಮಾಡುತ್ತಿದ್ದಾರೆ. ಗಡಿಗ್ರಾಮದಲ್ಲಿ ಕನ್ನಡ ಭುವನೇಶ್ವರಿಯ ರಥವನ್ನು ನಿರಂತರವಾಗಿ ಎಳೆಯುತ್ತಿದ್ದಾರೆ. ನಾಡಿನ ಖ್ಯಾತ ವಿದ್ವಾಂಸರಾದ ಎಂ. ಚಿದಾನಂದ ಮೂರ್ತಿ, ಎಂ.ಎಂ.ಕಲಬುರ್ಗಿ, ಚಂಪಾ, ಸಿದ್ಧಲಿಂಗ ಪಟ್ಟಣಶೆಟ್ಟಿ, ಪಾಪು, ಎಸ್.ವಿದ್ಯಾಶಂಕರ, ಚೆನ್ನವೀರ ಕಣವಿ ಮುಂತಾದವರ ಮಾರ್ಗದರ್ಶನದಲ್ಲಿ ತಮ್ಮ ಕನ್ನಡ ಪುಸ್ತಕಪ್ರಕಟನಾ ಕಾರ್ಯವನ್ನು ಗೈಯ್ಯುತ್ತಿದ್ದಾರೆ. ಗಡಿಕನ್ನಡಿಗರ ಬಳಗ ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಬಾಳಿನಬುತ್ತಿ ಕಲಿಕಾಕೇಂದ್ರಗಳ ಮೂಲಕ ಕನ್ನಡ ಮಣಿಹವನ್ನು ಮುನ್ನಡೆಸಿಕೊಂಡು ಹೋಗುತ್ತಿದ್ದಾರೆ.

### ಕನ್ನಡ ಉತ್ಸವಗಳು, ಸಮಾರಂಭಗಳು ಮತ್ತು ಕಾರ್ಯಕ್ರಮಗಳು:

"ಮಠಾಧೀಶರು ಕೇವಲ ಮಠಗಳಿಗೆ ಮಾತ್ರ ಸೀಮಿತವಾಗದೆ ಜನರ ಜತೆಗಿದ್ದು ಜನರ ಬದುಕು ಹಸನಾಗುವಂತೆ ಕೆಲಸಮಾಡಬೇಕು. ನಾಡು-ನುಡಿಯ ಬಗ್ಗೆ ಜನರಲ್ಲಿ ಅಭಿಮಾನ, ನಾಡಿನ ರಕ್ಷಣೆಯ ಕಾರ್ಯದಲ್ಲಿ ಅವರು ಪಾಲುದಾರರಾಗಿರಬೇಕು. ಈ ರೀತಿಯ ಕಾರ್ಯವನ್ನು ಚಿಂಚಣಿಯ ಶ್ರೀಗಳು ಮಾಡುತ್ತಿರುವುದು ಸಂತೋಷದ ಸಂಗತಿ"[೮] ಗದುಗಿನ ಜಗದ್ಗುರುಗಳ ಕನ್ನಡ ಪರಿಸರದಲ್ಲಿ ಬೆಳೆದ ಅಲ್ಲಮಪ್ರಭು ಸ್ವಾಮಿಗಳು ತಮ್ಮ ಗುರುಗಳಂತೆಯೇ ತಮ್ಮನ್ನು ಕನ್ನಡ ಸೇವೆಗೆ ತೊಡಗಿಸಿಕೊಂಡಿದ್ದಾರೆ.

"ಉತ್ಸವ, ಪೂಜೆ, ಅಡ್ಡಪಲ್ಲಕ್ಕಿ, ಪಾದಪೂಜೆಗಳಿಗೆ ಹೆಚ್ಚಿನ ಮಹತ್ವ ನೀಡದ ಸ್ವಾಮಿಗಳು ಕನ್ನಡದ ಸೇವೆಯೇ ಪೂಜೆ, ಅದಕ್ಕಾಗಿ ಜೀವನ ಸಮರ್ಪಿಸುವುದೇ ಉತ್ಸವ ಎಂದು ತಿಳಿದು ಕನ್ನಡದ ಕಾರ್ಯಕ್ಕೆ ಅಣಿಯಾಗಿದ್ದಾರೆ"[೫] ಕನ್ನಡ ಭಾಷೆ ಉಳಿದರೆ ಮಾತ್ರ ಕರ್ನಾಟಕ ಉಳಿಯುತ್ತದೆ. ಎಂಬುದನ್ನು ಮನಗಂಡು ಗಡಿಯಲ್ಲಿ ಕನ್ನಡ ನುಡಿಯ ಉಳಿವಿಗಾಗಿ ನಿರಂತರ ಶ್ರಮಿಸುತ್ತಿದ್ದಾರೆ. ಗಡಿಭಾಗದಲ್ಲಿ ಕನ್ನಡ ಉತ್ಸವಗಳನ್ನು, ಕರ್ನಾಟಕ ರಾಜ್ಯೋತ್ಸವಗಳನ್ನು ಅರ್ಥಪೂರ್ಣವಾದ ರೀತಿಯಲ್ಲಿ ಆಚರಿಸುತ್ತಿದ್ದಾರೆ. ಕವಿ ಸಾಹಿತಿಗಳಿಗೆ ಸತ್ಕಾರ ಮತ್ತು ಮಕ್ಕಳಿಗಾಗಿ ವಿವಿಧ ಸ್ಪರ್ಧೆಗಳನ್ನು ಏರ್ಪಡಿಸುವದರ ಮೂಲಕ ಗಡಿಯಲ್ಲಿ ಕನ್ನಡ ಕಿಡಿಯನ್ನು ಹೊತ್ತಿಸುತ್ತಿದ್ದಾರೆ.

**೧. ರಾಜ್ಯೋತ್ಸವದ ವಿಶಿಷ್ಟ ಆಚರಣೆ:** ಅಲ್ಲಮಪ್ರಭು ಸ್ವಾಮಿಗಳು ಗಡಿಭಾಗದ ಚಿಂಚಣಿ ಗ್ರಾಮದಲ್ಲಿ ರಾಜ್ಯೋತ್ಸವನ್ನು ಬಹಳ ವೈವಿಧ್ಯಪೂರ್ಣವಾಗಿ ಆಚರಿಸುತ್ತಿದ್ದಾರೆ. ೦೨.೧೧.೧೯೯೯ ರಿಂದ ಮಠದಲ್ಲಿ ರಾಜ್ಯೋತ್ಸವ ಆಚರಣೆಯನ್ನು ಆರಂಭಿಸಿದ್ದಾರೆ. ಇದುವರೆಗೆ ೯ ರಾಜ್ಯೋತ್ಸವಗಳನ್ನು ವಿಶೇಷವಾದ ರೀತಿಯಲ್ಲಿ ಆಚರಣೆ ಮಾಡಿದ್ದಾರೆ. ಈ ರಾಜ್ಯೋತ್ಸವ ಆಚರಣೆಗೆ ನಾಡಿನ ಬೇರೆ ಬೇರೆ ಭಾಗಗಳಿಂದ ಅತಿಥಿಗಳನ್ನು ಆಹ್ವಾನಿಸಿ ಅವರ ನಾಡು-ನುಡಿ ಚಿಂತನೆಗಳನ್ನು ಗಡಿಕನ್ನಡ ಜನತೆಗೆ ತಲುಪಿಸುವ ಅನನ್ಯವಾದ ಕಾರ್ಯವನ್ನು ಮಾಡುತ್ತಿದ್ದಾರೆ. ಈ ಆಚರಣೆಗಳ ಸಂದರ್ಭದಲ್ಲಿ ಕ.ರಾ.ರ.ಸಾ.ಸಂ. ಚಿಕ್ಕೋಡಿ ವಿಭಾಗವು ವಿವಿಧ ರೂಪಕಗಳನ್ನು ಪ್ರದರ್ಶಿಸುತ್ತದೆ. ಹಾಗೆಯೇ ಗಡಿಗ್ರಾಮದ ವಿವಿಧ ಶಾಲೆಯ ವಿದ್ಯಾರ್ಥಿಗಳು ಮತ್ತು ಕನ್ನಡ ಸಂಘಟನೆಗಳು ನಾಡು-ನುಡಿಯ ಸಂಸ್ಕೃತಿಯನ್ನು ಬಿಂಬಿಸುವ ರೂಪಕಗಳನ್ನು ಪ್ರದರ್ಶಿಸುವ ಮೂಲಕ ಉತ್ಸವಕ್ಕೆ ಮೆರಗು ನೀಡುತ್ತವೆ.

೨.೧೧.೧೯೯೯ ರಂದು ನೆರವೇರಿದ ರಾಜ್ಯೋತ್ಸವದಲ್ಲಿ ಹುಬ್ಬಳ್ಳಿ ಮೂಜಗಂ ಶ್ರೀಗಳು ಮತ್ತು ನಿಡಸೋಸಿಯ ಶ್ರೀಗಳು ಪಾಲ್ಗೊಂಡು ನಾಡಹಬ್ಬದ ಆಚರಣೆಗೆ ಮುನ್ನುಡಿ ಬರೆದಿದ್ದಾರೆ. ಖ್ಯಾತ ವಿದ್ವಾಂಸರಾದ ಎಂ.ಚಿದಾನಂದಮೂರ್ತಿಗಳು ಅತಿಥಿಗಳಾಗಿ ಆಗಮಿಸಿ ಕನ್ನಡ ನಾಡಿನ ವ್ಯಾಪ್ತಿ ಮತ್ತು ಪ್ರಾಚೀನತೆಯನ್ನು ಕುರಿತು ತಮ್ಮ ವಿಚಾರಗಳನ್ನು ಹಂಚಿಕೊಂಡಿದ್ದಾರೆ.

೨.೧೧.೨೦೦೦ ರಂದು ಆಚರಿಸಿಲ್ಪಟ್ಟ ನಾಡಹಬ್ಬದಲ್ಲಿ ಡಾ.ಎಸ್.ವಿದ್ಯಾಶಂಕರ ಅವರು ಅತಿಥಿಗಳಾಗಿ ಪಾಲ್ಗೊಂಡು "ಹೈಕೋರ್ಟ ಪೀಠ ಕೊಡಲಾಗದ ಸರಕಾರ ಗಡಿಭಾಗದ ಎಷ್ಟು ಸಮಸ್ಯೆಗಳಿಗೆ ಸ್ಪಂದಿಸಲು ಸಾಧ್ಯ. ಗಡಿಭಾಗದ ನಿರ್ಲಕ್ಷದಿಂದಾಗಿ ಜನತೆ ಕಷ್ಟದಲ್ಲಿದ್ದಾರೆ. ಆರ್ಥಿಕ ಸುಭದ್ರತೆಗೆ ಹೋರಾಡುತ್ತಿರುವ ಮಠಗಳನ್ನು ನೋಡಿದರೆ ಚಿಂಚಣಿ ಮಠ ಕನ್ನಡಪರ ಪುಸ್ತಕಗಳನ್ನು ಪ್ರಕಾಶಿಸುತ್ತಿರುವುದು ಹೆಮ್ಮೆಯ

ವಿಷಯ"[೭] ಎಂದು ಕನ್ನಡ ಮಠದ ನುಡಿಕಾರ್ಯವನ್ನು ಮೆಚ್ಚಿಕೊಂಡು ಗಡಿಭಾಗದ ಸ್ಥಿತಿಯ ವಾಸ್ತವಿಕತೆಯನ್ನು ಅವಲೋಕಿಸಿದ್ದಾರೆ.

೦೨.೧೧.೨೦೦೧ ರಲ್ಲಿ ಹಮ್ಮಿಕೊಂಡ ರಾಜ್ಯೋತ್ಸವದಲ್ಲಿ ಬಾಲ್ಕಿ ಹಿರೇಮಠ ಸಂಸ್ಥಾನದ ಬಸವಲಿಂಗ ಪಟ್ಟದ್ದೇವರು ಭಾಗಿಗಳಾಗಿದ್ದು ಒಂದು ವಿಶೇಷವೆನಿಸಿದೆ. ಈ ಕಾರ್ಯಕ್ರಮಕ್ಕೆ ಕನ್ನಡ ಪತ್ರಿಕೋದ್ಯಮಿ, ಹೋರಾಟಗಾರರಾದ ಡಾ.ಪಾಪು ಅವರು ಅತಿಥಿಗಳಾಗಿ ಆಗಮಿಸಿದ್ದರು. ಇದೇ ಸಂದರ್ಭದಲ್ಲಿ ಪಾಟೀಲ ಪುಟ್ಟಪ್ಪನವರಿಗೆ ಬೆಳ್ಳಿಯ ಕನ್ನಡದ ಕಿರೀಟವನ್ನು ತೊಡಿಸಿ ಗೌರವಿಸಲಾಯಿತು. ಪಾಪು ಅವರು "ವಿವಿಧ ಇಲಾಖೆಗಳ ನೇಮಕಾತಿಯಲ್ಲಿ ಕನ್ನಡಿಗರಿಗೆ ಆಗುತ್ತಿರುವ ಅನ್ಯಾಯಗಳ ವಿರುದ್ಧ ಸಿಡಿದೇಳಬೇಕಾಗಿದೆ"[೭] ಎಂದು ಗಡಿಭಾಗದ ಜನತೆಯನ್ನು ಜಾಗೃತಗೊಳಿಸಿದ್ದಾರೆ. "ಮಠಗಳಲ್ಲಿ ಇಷ್ಟು ವಿಶೇಷವಾಗಿ ರಾಜ್ಯೋತ್ಸವ ಆಚರಣೆ ಮಾಡುತ್ತಿರುವುದು ಮಾದರಿಯಾಗಿದೆ. ಇದನ್ನೆಲ್ಲ ಮಠದವರು ಅನುಸರಿಸುವುದರಿಂದ ಕನ್ನಡ ಕ್ರಾಂತಿಕಹಳೆ ಊದಬಹುದು"[೮] ಎಂದು ಶ್ರೀಮಠವು ಆಚರಿಸುತ್ತಿರುವ ನಾಡಹಬ್ಬದ ವಿಶೇಷತೆಯನ್ನು ಕೊಂಡಾಡಿದ್ದಾರೆ ಹಾಗೂ ಈ ರೀತಿಯಾದ ಕಾರ್ಯಕ್ರಮಗಳನ್ನು ಇನ್ನುಳಿದ ಮಠಗಳು ಮಾಡಿದರೆ ಕನ್ನಡವು ಬಲಿಷ್ಠಗೊಳ್ಳುತ್ತದೆ ಎಂಬುದನ್ನು ಒತ್ತಿಹೇಳಿದ್ದಾರೆ.

ಶ್ರೀಮಠದಲ್ಲಿ ೪ನೇ ರಾಜ್ಯೋತ್ಸವವು ದಿನಾಂಕ: ೦೨.೧೧.೨೦೦೨ ರಂದು ಪ್ರಭಾಕರ ಕೋರೆ ಮತ್ತು ರಮೇಶ ಜಿಗಜಿಣಗಿ ಅವರ ಉಪಸ್ಥಿತಿಯಲ್ಲಿ ನೆರವೇರಿತು. "ಇಂದಿನ ದಿನಗಳಲ್ಲಿ ಗಡಿಪ್ರದೇಶದಲ್ಲಿ ವೈವಿಧ್ಯಪೂರ್ಣವಾಗಿ ರಾಜ್ಯೋತ್ಸವ ಆಚರಿಸುತ್ತಿರುವ ಗಡಿಕನ್ನಡಿಗರ ಬಳಗವು ಸರಕಾರವು ಮಾಡುವ ಕನ್ನಡದ ಕೆಲವನ್ನು ಮಾಡುತ್ತಿದೆ. ಮಠಾಧೀಶರು ಕನ್ನಡದ ಕೆಲಸವನ್ನು ಮಾಡುತ್ತಾ ಕನ್ನಡದ ಉಳಿವಿಗಾಗಿ ಶ್ರಮಿಸುತ್ತಿದ್ದಾರೆ"[೯] ಧರ್ಮಜಾಗೃತಿಯೊಂದಿಗೆ ಸಾಮಾಜಿಕ ಮತ್ತು ಸಾಹಿತ್ಯಿಕ ರಂಗಗಳಲ್ಲಿ ಮಹತ್ವಪೂರ್ಣ ಕಾರ್ಯಚಟುವಟಿಕೆಗಳನ್ನು ಹಮ್ಮಿಕೊಳ್ಳುತ್ತಿರುವ ಸ್ವಾಮೀಜಿಯವರ ಕನ್ನಡಕಾರ್ಯವನ್ನು ಡಾ. ಪ್ರಭಾಕರ ಕೋರೆಯವರು ಮನದುಂಬಿ ಬಣ್ಣಿಸಿದ್ದಾರೆ.

೫ನೇ ರಾಜ್ಯೋತ್ಸವ ೦೨.೧೧.೨೦೦೩ ರಂದು ನಾಡೋಜ ಏಣಗಿ ಬಾಳಪ್ಪನವರ ಅತಿಥಿಸ್ಥಾನದಲ್ಲಿ ನೆರವೇರಿತು. ಈ ಕಾರ್ಯಕ್ರಮದಲ್ಲಿ ರಾಜಕೀಯ ಧುರೀಣರಾದ ಶ್ರೀ ಎಚ್.ಕೆ. ಪಾಟೀಲರು ಉಪಸ್ಥಿತರಿದ್ದು "ಗದುಗಿನ ತೋಂಟಧಾರ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳ ಗರಡಿಯಲ್ಲಿ ಪಳಗಿದ ಶ್ರೀ ಅಲ್ಲಮಪ್ರಭು ಸ್ವಾಮಿಗಳು ಗಡಿನಾಡಿನಲ್ಲಿ ಕನ್ನಡ ಕಟ್ಟುತ್ತಿರುವ ಕಾರ್ಯ ಶ್ಲಾಘನೀಯ"[೧೦] ಎಂಬ ಮಾತಿನಿಂದ ಗಡಿಭಾಗದಲ್ಲಿ ನುಡಿಜಾಗೃತಿ ಗೈಯ್ಯುತ್ತಿರುವ ಅಲ್ಲಮಪ್ರಭು ಸ್ವಾಮಿಗಳ ನಾಡು-ನುಡಿ ಕಾಳಜಿಯನ್ನು ಮೆಚ್ಚಿಕೊಂಡಿದ್ದಾರೆ.

೨.೧೧.೨೦೦೪ ರಂದು ಆಚರಿಸಲ್ಪಟ್ಟ ರಾಜ್ಯೋತ್ಸವದಲ್ಲಿ ಡಾ. ಜಿ.ಎಸ್. ಸಿದ್ಧಲಿಂಗಯ್ಯ ಅತಿಥಿಗಳಾಗಿ ಭಾಗವಹಿಸಿ "ಚಿಂಚಣಿ ಮಠದ ಹಾಗೆ ಕನ್ನಡದಕಾರ್ಯ

ಎಲ್ಲ ಗಡಿಭಾಗದಲ್ಲಿಯೂ ನಡೆಯುವುದು ಅಗತ್ಯವಾಗಿದೆ"[೧೧] ಎಂಬ ಸತ್ಯವನ್ನು ತಿಳಿಸಿದ್ದಾರೆ. ಶಿರಹಟ್ಟಿಯ ಫಕೀರೇಶ್ವರ ಸ್ವಾಮಿಗಳು ಸಾನಿಧ್ಯವನ್ನು ವಹಿಸಿಕೊಂಡು "ಕನ್ನಡ ಬೆಳೆದರೆ ಕನ್ನಡಿಗರು ಹಾಗೂ ಕರ್ನಾಟಕ ಬೆಳೆಯುತ್ತದೆ"[೧೨] ಎಂಬ ವಾಸ್ತವಿಕತೆಯನ್ನು ಜನತೆಯ ಮುಂದೆ ವ್ಯಕ್ತಪಡಿಸಿದ್ದಾರೆ.

೦೨.೧೧.೨೦೦೫ ರಂದು ನಡೆದ ರಾಜ್ಯೋತ್ಸವದಲ್ಲಿ ಪ್ರೊ. ಚಂಪಾ ಅವರು ಅತಿಥಿಗಳಾಗಿ ಭಾಗವಹಿಸಿ "ಕನ್ನಡಿಗರಾದ ನಾವು ಕನ್ನಡಿಗರೆನ್ನುವದನ್ನು ಮರೆತು ಬದುಕುತ್ತಿದ್ದೇವೆ. ಗಡಿಭಾಗದಲ್ಲಿ ಮಠಗಳು ಕನ್ನಡಪರವಾಗಿ ಹೋರಾಟ ಮಾಡಿರುವುದನ್ನು ಸ್ಮರಿಸಬಹುದು"[೧೩] ಎಂದು ಹೇಳುವುದರ ಮೂಲಕ ಕನ್ನಡಿಗರು ಕನ್ನಡತನವನ್ನು ಬೆಳೆಸಿಕೊಳ್ಳಬೇಕೆಂಬುದುನ್ನು ತಿಳಿಸಿದ್ದಾರೆ. ಯಡೂರಿನ ಡಾ. ಸಿದ್ಧರಾಮಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು ಸಾನಿಧ್ಯವಹಿಸಿ "ಎಲ್ಲಿಯವರೆಗೆ ಕನ್ನಡಿಗರಲ್ಲಿ ಕನ್ನಡಾಭಿಮಾನ ಮತ್ತು ಸಹೃದಯತೆ ಜಾಗೃತಗೊಳ್ಳುವುದಿಲ್ಲವೋ ಅಲ್ಲಿಯವರೆಗೆ ನಾವು ಕರ್ನಾಟಕದಲ್ಲಿ ಇದ್ದೂ ಇಲ್ಲದಂತೆ"[೧೪] ಎಂಬ ಕಟುಸತ್ಯವನ್ನು ಹೇಳುವುದರ ಮೂಲಕ ಕನ್ನಡಿಗರು ಜಾಗೃತಗೊಳ್ಳಬೇಕೆಂದು ಹೇಳಿದ್ದಾರೆ.

೮ನೇ ರಾಜ್ಯೋತ್ಸವವು ೦೨.೧೧.೨೦೦೬ ರಂದು ನೆರವೇರಿತು. ಮುಖ್ಯ ಅತಿಥಿಗಳಾಗಿ ಶ್ರೀ ಜಯಂತ ಕಾಯ್ಕಿಣಿ ಹಾಗೂ ಖ್ಯಾತ ಚಲನಚಿತ್ರ ಕಲಾವಿದ ಮು.ಮಂ. ಚಂದ್ರು ಪಾಲ್ಗೊಂಡಿದ್ದರು. ನಾಡಿನ "ಪ್ರಗತಿಪರ ಮಠಾಧೀಶರುಗಳಲ್ಲಿ ಚಿಂಚಣಿ ಶ್ರೀಗಳು ಒಬ್ಬರು"[೧೫] ಎಂದು ಜಯಂತ ಕಾಯ್ಕಿಣಿಯವರು ಅಲ್ಲಮಪ್ರಭು ಸ್ವಾಮಿಗಳ ವಿಚಾರವಂತಿಕೆಯನ್ನು ಮೆಚ್ಚಿಕೊಂಡಿದ್ದಾರೆ. "ಜನಪ್ರತಿನಿಧಿಗಳ ಭಾಷಾನಿರಭಿಮಾನದಿಂದಾಗಿ ತಾಯ್ನೆಲದಲ್ಲಿಯೇ ನಾಡು-ನುಡಿಯ ರಕ್ಷಣೆಗಾಗಿ ಹೋರಾಟ ನಡೆಸಬೇಕಾದ ದುರಂತ ಬಂದೊದಗಿದೆ"[೧೬] ಎಂಬ ವಾಸ್ತವಾಂಶವನ್ನು ಕನ್ನಡಿಗರ ಮುಂದೆ ತೋಡಿಕೊಂಡಿದ್ದಾರೆ. ಈ ಮೂಲಕ ಜನತೆಯು ಒಳ್ಳೆಯ ಕನ್ನಡಾಭಿಮಾನಿ ಜನಪ್ರತಿನಿಧಿಗಳನ್ನು ಆಯ್ಕೆಮಾಡಬೇಕೆಂಬ ಸೂಚನೆಯನ್ನು ನೀಡಿದ್ದಾರೆ.

೦೨.೧೧.೨೦೦೭ ರಂದು ನಡೆದ ೯ನೇ ರಾಜ್ಯೋತ್ಸವದ ಸಾನಿಧ್ಯವನ್ನು ಶಿವಮೊಗ್ಗಾ ಜಿಲ್ಲೆಯ ಆನಂದಪುರ ಮಠದ ಮುರುಘರಾಜೇಂದ್ರ ಸ್ವಾಮಿಗಳು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಡಾ. ಎಂ.ಎಂ. ಕಲಬುರ್ಗಿಯವರು ಭಾಗ ವಹಿಸಿದ್ದರು. "ಚಿಕ್ಕೋಡಿ ತಾಲೂಕಿನ ಗಡಿಭಾಗದಲ್ಲಿ ಕಳೆದು ೧೦ ವರ್ಷಗಳಿಂದಲೂ ರಾಜ್ಯೋತ್ಸವ ಸಂದರ್ಭದಲ್ಲಿ ಪ್ರಕಟಿಸುತ್ತಿರುವ ಕನ್ನಡಪರ ಪುಸ್ತಕಗಳ ಅಭ್ಯಾಸ ಅನುಷ್ಠಾನಕ್ಕೆ ಬರಬೇಕು. ಮುಂಬರುವ ದಿನಗಳಲ್ಲಿ ಗಡಿಕನ್ನಡಿಗರ ಬಳಗ ಕನ್ನಡದ ಶ್ರೇಷ್ಠ ಕೃತಿಗಳನ್ನು ಮರಾಠಿಗೆ ಅನುವಾದಿಸಿ ಮರಾಠಿಗರಿಗೂ ಕನ್ನಡ ಜಾಗೃತಿಯನ್ನು

ಮೂಡಿಸುವ ಕಾರ್ಯ ಮಾಡುವ ಅಗತ್ಯವಿದೆ"[೧೭] ಎಂದು ಕನ್ನಡ ಜಾಗೃತಿಯನ್ನು ಮರಾಠಿ ನೆಲದಲ್ಲಿಯೂ ವ್ಯಾಪಿಸುವಂತಾಗಬೇಕೆಂದು ಅಭಿಪ್ರಾಯಪಟ್ಟಿದ್ದಾರೆ.

ಈ ರೀತಿಯಾಗಿ ಶ್ರೀಮಠವು ಚಿಂಚಣಿಯ ಗ್ರಾಮೀಣ ಭಾಗದಲ್ಲಿ ರಾಜ್ಯೋತ್ಸವಗಳನ್ನು ವಿಶಿಷ್ಟವಾದ ರೀತಿಯಲ್ಲಿ ಆಚರಿಸುತ್ತಿದೆ. ಅಲ್ಲಮಪ್ರಭು ಸ್ವಾಮಿಗಳು ಇಂಥ ಅರ್ಥಪೂರ್ಣವಾದ ರಾಜ್ಯೋತ್ಸವಗಳ ಮೂಲಕ ಗ್ರಾಮೀಣ ಜನರಲ್ಲಿ ಹಾಗೂ ಗಡಿಭಾಗದಲ್ಲಿ ಕನ್ನಡಪರ ಅಭಿಮಾನವನ್ನು ಮೂಡಿಸುತ್ತಿದ್ದಾರೆ. "ಭಾಷಣಗಳು ಎಲ್ಲ ಕಡೆಗೆ ನಡೆಯುತ್ತವೆ. ಆದರೆ ಕನ್ನಡ–ಕನ್ನಡಿಗ–ಕರ್ನಾಟಕ ಬಗ್ಗೆ ಚಿಂತನೆಗೆ ಪ್ರೇರೇಪಿಸುವ ವಿಚಾರ ಪ್ರಚೋದಕ ಆಲೋಚನೆಗಳನ್ನು ಪುಸ್ತಕ ರೂಪದಲ್ಲಿ ಕೊಡುವುದು ನಿಜವಾದ ರಚನಾತ್ಮಕ ಕನ್ನಡಕಾರ್ಯ. ಕನ್ನಡ ಜಾಗೃತಿ ಪುಸ್ತಕ ಮಾಲೆಯ ಪುಸ್ತಕಗಳ ಬಿಡುಗಡೆ ಚಿಂಚಣಿ ಮಠದಲ್ಲಿ ನಡೆಯುವ ರಾಜ್ಯೋತ್ಸವಗಳ ವೈಶಿಷ್ಟ್ಯ[೧೮]. ಸ್ವಾಮಿಗಳು ತಮ್ಮ ದೂರಗಾಮಿ ವಿಚಾರಗಳಿಂದ ನಾಡು–ನುಡಿ ಕುರಿತಾದ ಉತ್ಸವಗಳ ಆಚರಣೆಯಲ್ಲಿ ವಿಶೇಷವಾದ ಯೋಜನೆಗಳನ್ನು ಹೊಂದಿದ್ದಾರೆ. ಇದುವರೆಗೆ ಶ್ರೀ ಮಠದಲ್ಲಿ ೯ ರಾಜ್ಯೋತ್ಸವಗಳನ್ನು ವಿನೂತನ ಮಾದರಿಗಳಲ್ಲಿ ಆಯೋಜಿಸಿದ್ದಾರೆ. ಈ ರಾಜ್ಯೋತ್ಸವಗಳು ಕೇವಲ ಆಡಂಬರದ ತೋರಿಕೆಯ ಉತ್ಸವಗಳಲ್ಲ. ಅವು ಕೇವಲ ಕಾಟಾಚಾರಕ್ಕೆ ನಡೆಯುವ ಸಮಾರಂಭಗಳಲ್ಲ. ತೋರಿಕೆಯ ಅಭಿಮಾನ ಪ್ರದರ್ಶಿಸುವ ಸಂದರ್ಭಗಳಂತೂ ಅಲ್ಲವೇ ಅಲ್ಲ. "ಶ್ರೀಮಠವು ನಡೆಸುತ್ತಿರುವ ಸಾಹಿತ್ಯಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ಕಾರ್ಯಗಳು ಅಮಿತಾನಂದವನ್ನುಂಟುಮಾಡುವಂತಹುಗಳು"[೧೯]. ಗಡಿಭಾಗದಲ್ಲಿ ಕನ್ನಡ ಜಾಗೃತಿಯ ವ್ರತತೊಟ್ಟ ಶ್ರೀಗಳು ಸಾಹಿತಿ–ವಿದ್ವಾಂಸರನ್ನು ಚಿಂಚಣಿಗೆ ಬರಮಾಡಿಕೊಂಡು ಕನ್ನಡದ ವಾತಾವರಣವನ್ನು ನಿರ್ಮಾಣ ಮಾಡುತ್ತಿದ್ದಾರೆ.

ಪ್ರತಿವರ್ಷ ನವ್ಹೆಂಬರ ೨ ರಂದು ಚಿಂಚಣಿಯಲ್ಲಿ ದೊಡ್ಡ ಜಾತ್ರೆಯೇ ನಡೆಯುತ್ತದೆ. ಆ ಸಮಾರಂಭವನ್ನು ನೋಡುವುದು ರಸದೌತಣವನ್ನು ಸವಿದಂತೆಯೇ ಆಗುತ್ತದೆ.

ಗಡಿಭಾಗದ ಖಡಕಲಾಟ ಗ್ರಾಮದಲ್ಲಿ ಕರ್ನಾಟಕ ಏಕೀಕರಣಗೊಂಡ ೪೫ ವರ್ಷಗಳ ನಂತರ ಮೊದಲಬಾರಿ ರಾಜ್ಯೋತ್ಸವ ಆಚರಣೆಗೊಂಡಿತು. ಇದಕ್ಕೆ ಕಾರಣ ಅಲ್ಲಮಪ್ರಭು ಸ್ವಾಮಿಗಳು. ೦೧.೧೧.೨೦೦೧ ರಂದು ಖಡಕಲಾಟದಲ್ಲಿ ನಡೆದ ನಾಡಹಬ್ಬದ ಆಚರಣೆ ಶ್ರೀಗಳು ಮಾಡಿದ ಒಂದು ಪವಾಡಸಾದೃಶ್ಯ ಕಾರ್ಯಕ್ರಮವೇ ಆಗಿದೆ. ಅಂದಿನಿಂದಲೂ ಖಡಕಲಾಟದಲ್ಲಿ ರಾಜ್ಯೋತ್ಸವ ಆಚರಣೆ ನಿರಂತರವಾಗಿ ನಡೆದುಕೊಂಡು ಬರುತ್ತಿದೆ. ಶ್ರೀಮಠದ ರಾಜ್ಯೋತ್ಸವ ಸಂದರ್ಭದಲ್ಲಿ ಪುಸ್ತಕ ಬಿಡುಗಡೆ ಮತ್ತು ಸಾಹಿತಿ ವಿದ್ವಾಂಸರ ಸನ್ಮಾನ ಕಾರ್ಯಕ್ರಮಗಳು ಅವ್ಯಾಹತವಾಗಿ ನೆರವೇರುತ್ತಿವೆ.

೨. **ಗಡಿನಾಡ ಉತ್ಸವಗಳು:** ನವ್ಹೆಂಬರ ೨ ರಂದು ಮಾತ್ರ ಕನ್ನಡೋತ್ಸವ ಆಚರಿಸಿ ಬಿಡುವುದರಿಂದ ಯಾವುದೇ ಪ್ರಯೋಜನವಿಲ್ಲವೆಂದು ಅರಿತು, ಶ್ರೀಗಳು ವರ್ಷದುದ್ದಕ್ಕೂ ಕನ್ನಡ ಜಾಗೃತಿಗಾಗಿ ಹಲವಾರು ಸಭೆಸಮಾರಂಭಗಳನ್ನು ಏರ್ಪಡಿಸಿ ಅದರಲ್ಲಿ ಭಾಗವಹಿಸುತ್ತಾರೆ. ಮಠದೊಳಗೆ ಆಚರಿಸುವ ರಾಜ್ಯೋತ್ಸವಗಳು ಒಂದು ಬಗೆಯದಾದರೆ ಗಡಿಭಾಗದಲ್ಲಿ ನಡೆಯುವ ಗಡಿನಾಡ ಉತ್ಸವಗಳು ಬೇರೊಂದು ಬಗೆಯವುಗಳಾಗಿವೆ. ಚಿಂಚಣಿ ಶ್ರೀಗಳು ಚಿಕ್ಕೋಡಿ, ನಿಪ್ಪಾಣಿ, ಅಥಣಿ ಮುಂತಾದ ಗಡಿಪ್ರದೇಶಗಳಲ್ಲಿ ನಡೆದ ಗಡಿಕನ್ನಡಿಗರ ಐಕ್ಯತೆಯ ಉತ್ಸವಗಳಾದ ಗಡಿನಾಡ ಕನ್ನಡ ಉತ್ಸವಗಳಲ್ಲಿ ಸಕ್ರೀಯವಾಗಿ ಭಾಗವಹಿಸಿದ್ದಾರೆ. ಈ ಎಲ್ಲ ಉತ್ಸವಗಳಲ್ಲಿ ಗಡಿನಾಡಿನ ಸಮಸ್ಯೆಗಳನ್ನು ಕುಳಿತು ತಮ್ಮ ಪ್ರಬುದ್ಧ ವಿಚಾರಗಳನ್ನು ಹಂಚಿಕೊಂಡಿದ್ದಾರೆ. ೧೫.೦೩.೨೦೦೩ ರಂದು ಚಿಕ್ಕೋಡಿಯಲ್ಲಿ ನಡೆದ ಗಡಿನಾಡು ಉತ್ಸವದಲ್ಲಿ ಕನ್ನಡ ನಾಡು–ನುಡಿ, ನೆಲ–ಜಲ ಕುರಿತು ವಿಚಾರ ಮಂಡಿಸಿದ್ದಾರೆ. ಅಥಣಿಯಲ್ಲಿ ನಡೆದ ಗಡಿನಾಡ ಉತ್ಸವದಲ್ಲಿ "ಗಡಿ ಅಂದ್ರ ಧೋತರ ದಡಿ ಇದ್ದಾಂಗ. ಎಲ್ಲಿತನಕ ದಡಿ ಗಟ್ಟಿರತೈತೀ ಅಲ್ಲಿತನ ಧೋತ್ರ ಗಟ್ಟಿ ಇರ್ತತೀ. ದಡಿ ಹರಿತಂದ್ರ ಧೋತ್ರ ಹರೀತೈತಿ" ಎಂದು ಗಡಿನಾಡಿನ ಪ್ರಾಮುಖ್ಯತೆಯನ್ನು ವ್ಯಕ್ತಪಡಿಸಿದ್ದಾರೆ.

೩. **ವಿವಿಧ ಸ್ಪರ್ಧೆಗಳು:** ಸ್ವಾಮಿಗಳು ಗಡಿಬಳಗದ ಆಶ್ರಯದಲ್ಲಿ ಶಾಲಾ ಮಕ್ಕಳಿಗೆ ಹಾಗೂ ಯುವಕರಿಗೆ ವಿಭಿನ್ನ ಸ್ಪರ್ಧೆಗಳನ್ನು ಹಮ್ಮಿಕೊಳ್ಳುತ್ತಿದ್ದಾರೆ. ಇಂತಹ ಚಟುವಟಿಕೆಗಳ ಮೂಲಕ ಮಕ್ಕಳಲ್ಲಿ ಮತ್ತು ಯುವಕರಲ್ಲಿ ಕನ್ನಡ ಭಾಷೆಯ ಬಗೆಗೆ ಅರಿವನ್ನು ಮೂಡಿಸುತ್ತಿದ್ದಾರೆ. ೦೭.೦೨.೨೦೦೧ ರಂದು ಕನ್ನಡ ಮತ್ತು ಸಂಸ್ಕೃತಿಯ ಇಲಾಖೆಯ ಸಹಯೋಗದೊಂದಿಗೆ 'ಚಿಗುರು' ಕಾರ್ಯಕ್ರಮದಲ್ಲಿ ಜನಪದ ನೃತ್ಯವನ್ನಾಧರಿಸಿದ ಗಾಯನ ಸ್ಪರ್ಧೆಯನ್ನು ಆಯೋಜಿಸಿದ್ದರು. ೦೨.೧೧.೨೦೦೫ ರಂದು ಶಾಲಾ ಮಕ್ಕಳಿಗೆ ಕನ್ನಡ ಕವಿಗಳ ಹೆಸರು ಬರೆಯುವ ಸ್ಪರ್ಧೆಯನ್ನು ಯಶಸ್ವಿಯುತವಾಗಿ ಏರ್ಪಡಿಸಿದ್ದರು. ಈ ಕಾರ್ಯಕ್ರಮವು ವಿದ್ಯಾರ್ಥಿಗಳಲ್ಲಿ ಕನ್ನಡದ ಕವಿಗಳ ಬಗೆಗೆ ಹಾಗೂ ಅವರ ಸಾಹಿತ್ಯದ ಬಗೆಗೆ ತಿಳಿದುಕೊಳ್ಳಲು ಪೂರಕವಾಗಿದೆ. ೨೧.೧೦.೨೦೦೩ ರಂದು ಜಾನಪದ ನೃತ್ಯರೂಪಕ ಕಾರ್ಯಕ್ರಮವನ್ನು ಕುಮಾರಿ ವ್ಹಿ.ಎಸ್. ಬೆಳಗಲಿ ನೀಡಿದ್ದಾರೆ. ೦೫.೧೧.೧೯೯೮ ರಂದು ಕನ್ನಡಸಾಹಿತ್ಯ–ಸಂಸ್ಕೃತಿಗೆ ಸಂಬಂಧಿಸಿದಂತೆ ಭಾಷಣ ಸ್ಪರ್ಧೆಗಳನ್ನು ಹಮ್ಮಿಕೊಂಡಿದ್ದಾರೆ. ೦೮.೧೧.೧೯೯೮ ರಂದು ಕನ್ನಡಪರವಾದ ಕಾವ್ಯಗಾಯನ ಸ್ಪರ್ಧೆಯನ್ನು ಏರ್ಪಡಿಸಿದ್ದರು. ಇದೇ ದಿನ ರಂಗೋಲಿಯ ಸ್ಪರ್ಧೆಯನ್ನು ಸಹ ಆಯೋಜಿಸಿದ್ದರು. ಈ ಎಲ್ಲ ಕಾರ್ಯಕ್ರಮಗಳಲ್ಲಿ ಕನ್ನಡ ಬಾರದ ವಿದ್ಯಾರ್ಥಿಗಳು ವಿಷಯವನ್ನು ಮರಾಠಿ ಲಿಪಿಯಲ್ಲಿ ಬರೆದುಕೊಂಡು ಭಾಗವಹಿಸಿ ಬಹುಮಾನಗಳನ್ನು ಗಳಿಸಿದ್ದಾರೆ. ಇದರ ಜೊತೆಗೆ ಚರ್ಚಾಕೂಟ, ವಚನ

ಕಂಠಪಾಠ ಸ್ಪರ್ಧೆಗಳನ್ನು ಏರ್ಪಡಿಸುವ ಮೂಲಕ ಮಕ್ಕಳಲ್ಲಿ ಕನ್ನಡ ಕಲೆ, ಸಾಹಿತ್ಯ, ಸಂಸ್ಕೃತಿಯ ರಸಾನಭವುವನ್ನು ಗೈಯ್ಯುತ್ತಿದ್ದಾರೆ.

**೪. ಭಾಗವಹಿಸಿದ ಕನ್ನಡ ಕಾರ್ಯಕ್ರಮಗಳು:** ಚಿಕ್ಕೋಡಿ ಪರಿಸರದಲ್ಲಿ ಎಲ್ಲಿಯಾದರೂ ಕನ್ನಡಪರ ಕಾರ್ಯಕ್ರಮಗಳು ನಡೆಯುತ್ತಿವೆ ಎಂದರೇ ಅಲ್ಲಿ ಚಿಂಚಣಿ ಶ್ರೀಗಳು ಇರುವರೆಂದೇ ಅರ್ಥ. ಕನ್ನಡಪರ ಸಂಘಟನೆಗಳ ಉದ್ಘಾಟನೆ, ಶಾಲಾ ಕಾಲೇಜುಗಳ ಸಾಂಸ್ಕೃತಿಕ ಕಾರ್ಯಕ್ರಮ ಹಾಗೂ ವಿದ್ಯಾಸಂಸ್ಥೆಗಳ ಉದ್ಘಾಟನಾ ಸಮಾರಂಭಗಳಲ್ಲಿ ಅತ್ಯಂತ ಆಸಕ್ತಿಯಿಂದ ಭಾಗವಹಿಸುತ್ತಾರೆ. ೧೨.೦೪.೯೯ ರಂದು ಚಿಕ್ಕೋಡಿಯಲ್ಲಿ ನಡೆದ 'ದಲಿತ ಕಾವ್ಯ ಒಂದು ಚಿಂತನೆ' ಕಾರ್ಯಕ್ರಮದ ಸಾನಿಧ್ಯವನ್ನು ವಹಿಸಿದ್ದರು. ೦೧.೧೧.೨೦೦೦ ರಂದು ರಾಯಬಾಗ ತಾಲೂಕಿನ ಹಿಡಕಲ್ಲದಲ್ಲಿ ಕನ್ನಡ ಸಾಹಿತ್ಯ ಚಿಂತನ ಬಳಗವು ಆಯೋಜಿಸಿದ್ದ ರಾಜ್ಯೋತ್ಸವ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು. ಅಂದೇ ಸಾಯಂಕಾಲ ಸಂಕೇಶ್ವರದಲ್ಲಿ ಏರ್ಪಡಿಸಿದ್ದ ರಾಜ್ಯೋತ್ಸವ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಕನ್ನಡದ ನುಡಿಸೇವೆಯನ್ನು ಮಾಡಿದ್ದಾರೆ. ೦೪.೧೧.೨೦೦೧ ರಂದು ಕನ್ನಡ ಸಾಹಿತ್ಯ ಪರಿಷತ್ತಿನ ಚಿಕ್ಕೋಡಿ ತಾಲೂಕಾ ಘಟಕದ ಉದ್ಘಾಟನೆಯನ್ನು ನೆರವೇರಿಸಿ ಸಾಹಿತ್ಯಿಕ ಚಟುವಟಿಕೆಗಳಿಗೆ ಆರಂಭ ನೀಡಿದ್ದಾರೆ. ೦೬.೧೧.೨೦೦೨ ರಂದು ನಂದಿಕುರಳಿಯಲ್ಲಿ ಆಯೋಜಿಸಿದ್ದ ರಾಜ್ಯೋತ್ಸವ ಮತ್ತು ಪುಸ್ತಕ ಬಿಡುಗಡೆ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ೧೨.೧೦.೨೦೦೨ ರಂದು ನಡೆದ ನಾಗನೂರು ಸ್ವಾಮಿಗಳ ಪ್ರಸಾದ ನಿಲಯದ ಅಮೃತ ಮಹೋತ್ಸವ ಹಾಗೂ ನಾಡಹಬ್ಬದಲ್ಲಿ ತಮ್ಮದೇ ಆದ ನಾಡು-ನುಡಿಯ ಕುರಿತಾದ ವಿಚಾರಧಾರೆಗಳನ್ನು ವ್ಯಕ್ತಪಡಿಸಿದ್ದಾರೆ. ೦೧.೧೧.೨೦೦೩ ರಂದು ಚಿಕ್ಕೊಡಿಯಲ್ಲಿ ವಾ.ಕ.ರ.ಸಾ.ಸಂ. ಏರ್ಪಡಿಸಿದ ರಾಜ್ಯೋತ್ಸವದಲ್ಲಿ ಭಾಗವಹಿಸಿ ನಾಡಹಬ್ಬದ ಆಚರಣೆಯ ಪ್ರಸ್ತುತತೆಯನ್ನು ಕುರಿತು ಮಾತನಾಡಿದ್ದಾರೆ.

೨೬.೦೧.೨೦೦೪ ರಂದು ಬಂಡಾಯ ಸಾಹಿತ್ಯ ಸಂಘಟನೆ ಚಿಕ್ಕೋಡಿಯವರು ಹಮ್ಮಿಕೊಂಡ ಗಣರಾಜ್ಯೋತ್ಸವ ಕವಿಗೋಷ್ಠಿಯಲ್ಲಿ ಭಾಗವಹಿಸಿ "ಹೃದಯದಿಂದ ಸಹಜವಾಗಿ ಬಂದ ಭಾವನೆಗಳನ್ನು ಕಾವ್ಯರೂಪದಲ್ಲಿ ಬರೆದರೆ ಅವು ಗಟ್ಟಿ ಕವನಗಳಾಗುತ್ತವೆ ಮತ್ತು ಅಂಥವುಗಳಿಗೆ ಉತ್ತಮ ಮೌಲ್ಯವಿರುತ್ತದೆ"[೨೦] ಎಂದು ಕಾವ್ಯದ ಸತ್ವವನ್ನು ಮತ್ತು ರಚನೆಯ ರೀತಿಯನ್ನು ಕುರಿತು ತಮ್ಮ ಅಭಿಪ್ರಾಯಗಳನ್ನು ಹಂಚಿಕೊಂಡಿದ್ದಾರೆ. ಅಕ್ಟೋಬರ ೨೦೦೪ ರಂದು ಕನ್ನಡ ವಿಶ್ವವಿದ್ಯಾಲಯ ಹಂಪಿ ಇವರ ಸಹಯೋಗದೊಂದಿಗೆ ಸಂಕೇಶ್ವರದ ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯ ಹಮ್ಮಿಕೊಂಡ ಅಖಿಲ ಭಾರತ ಹಸ್ತಪ್ರತಿ ಸಮ್ಮೇಳನದಲ್ಲಿ ಭಾಗವಹಿಸಿದ್ದ ಶ್ರೀಗಳು "ಗಡಿಭಾಗದಲ್ಲಿ ಕನ್ನಡ ವಾತಾವರಣ ನಿರ್ಮಾಣವಾಗುವಂತೆ ನೋಡಿಕೊಳ್ಳಬೇಕು. ಗಡಿ

ಸಂಘರ್ಷದ ಬದಲು ಗಡಿಭಾಗದಲ್ಲಿ ಕನ್ನಡ ಕಾರ್ಯಕ್ರಮಗಳನ್ನು ಹಾಕಿಕೊಂಡು ಭಾಷಾ ಬಾಂಧವ್ಯವನ್ನು ಬೆಳೆಸುವ ಅವಶ್ಯಕತೆಯನ್ನು ಒತ್ತಿಹೇಳಿದ್ದಾರೆ"[೨೧] ಅಂದರೆ ಕನ್ನಡ ವಿಶ್ವವಿದ್ಯಾಲಯ ಹಂಪಿಯವರು ಗಡಿಭಾಗದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕನ್ನಡ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ನಾಡಿನ ಗಡಿಯನ್ನು ಗಟ್ಟಿಗೊಳಿಸಬೇಕೆಂದು ಹೇಳಿದ್ದಾರೆ.

೨೮.೧೧.೨೦೦೪ ರಂದು ಕಾರದಗಾ ಗ್ರಾಮದಲ್ಲಿ ಸಾಹಿತ್ಯ ವಿಕಾಸ ಮಂಡಳದವರು ಹಮ್ಮಿಕೊಂಡ ೯ ನೇ ಗ್ರಾಮೀಣ ಸಾಹಿತ್ಯ ಸಮ್ಮೇಳನದ ಉದ್ಘಾಟನೆಯನ್ನು ನೆರವೇರಿಸಿ ಮಹಾರಾಷ್ಟ್ರದ ಮೂಲ ಕರ್ನಾಟಕ ಎಂಬುದನ್ನು ತಿಳಿಸಿದ್ದಾರೆ. ಶಿವಾಜಿಯು ಮೂಲತಃ ಕರ್ನಾಟಕದವನು ಎಂಬುದನ್ನು ಆಧಾರ ಸಮೇತ ತಿಳಿಸಿದ್ದಾರೆ. "ಆಮಂತ್ರಣ ಪತ್ರಿಕೆಯನ್ನು ಕನ್ನಡ ಭಾಷೆಯಲ್ಲಿ ಮುದ್ರಿಸಿದರೆ ಮಾತ್ರ ಕಾರ್ಯಕ್ರಮ ಉದ್ಘಾಟಿಸಲು ಬರುತ್ತೇನೆ"[೨೨] ಎಂದು ಸಂಘಟಕರಿಗೆ ಕರಾರುಮಾಡಿದ್ದರು. ಆದ್ದರಿಂದ ಸಂಘಟಕರು ಕಾರದಗಾ ಗ್ರಾಮೀಣ ಸಾಹಿತ್ಯ ಸಮ್ಮೇಳನದ ಆಮಂತ್ರಣ ಪತ್ರಿಕೆಯನ್ನು ಕನ್ನಡ ಮತ್ತು ಮರಾಠಿ ಎರಡೂ ಭಾಷೆಯಲ್ಲಿ ಮುದ್ರಿಸಿದರು. ಅಂದಿನಿಂದ ಪ್ರತಿವರ್ಷ ಅವರು ಆಮಂತ್ರಣ ಪತ್ರಿಕೆಯನ್ನು ಎರಡೂ ಭಾಷೆಯಲ್ಲಿ ಮುದ್ರಿಸುತ್ತಿದ್ದಾರೆ. ಗಡಿಭಾಗದಲ್ಲಿ ಕನ್ನಡ ಸಮಾರಂಭಗಳು ಹೇಗೆ ನಡೆಯಬೇಕೆಂಬುದಕ್ಕೆ ಹಾಗೂ ಭಾಷಾಬಾಂಧವ್ಯ ಬೆಳೆಸಿಕೊಳ್ಳುವ ವಿಚಾರಕ್ಕೆ ಈ ಘಟನೆ ಒಂದು ನಿದರ್ಶನವಾಗಿದೆ. ಗೆಳೆಯರ ಬಳಗ ಎಕ್ಸಂಬಾದಲ್ಲಿ ಹಮ್ಮಿಕೊಂಡ ದಶಮಾನೋತ್ಸವ ಮತ್ತು ಗಡಿಕನ್ನಡಿಗರ ಸಮಾವೇಶದಲ್ಲಿ ಗಡಿಭಾಗದ ಬಗೆಗೆ ತಮ್ಮ ವಿಚಾರವನ್ನು ವ್ಯಕ್ತಪಡಿಸಿದ್ದಾರೆ. ಗಡಿಕನ್ನಡಿಗರು ನಿತ್ಯ ಅನುಭವಿಸುವ ಯಾತನೆಗಳನ್ನು ಯಥಾವತ್ತಾಗಿ ನಿರೂಪಿಸದ್ದಾರೆ. ಸ್ಥಳೀಯ ಪ್ರೌಢಶಾಲೆಯಲ್ಲಿ ಜರುಗಿದ ಕುವೆಂಪು ಜನ್ಮಶತಮಾನೋತ್ಸವ, ೨೧.೦೨.೧೯೯೯ ರಂದು ಚಿಕ್ಕೋಡಿಯಲ್ಲಿ ಹಮ್ಮಿಕೊಂಡ ಎಸ್.ಎಲ್. ಭೈರಪ್ಪನವರ 'ಸಾರ್ಥ' ಕಾದಂಬರಿಯ ವಿಚಾರ ಸಂಕಿರಣದಲ್ಲಿ ಪಾಲ್ಗೊಂಡು "ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರು ಗಡಿಗ್ರಾಮಗಳನ್ನು ದತ್ತು ಪಡೆದುಕೊಂಡು ಕನ್ನಡ ಗ್ರಾಮಗಳನ್ನಾಗಿ ಪರಿವರ್ತಿಸಬೇಕು"[೨೩] ಎಂದು ಸರಕಾರವನ್ನು ಒತ್ತಾಯಿಸಿದ್ದಾರೆ. ಹಾರೂಗೇರಿಯಲ್ಲಿ ನಡೆದ ಬೆಳಗಾವಿ ಜಿಲ್ಲಾ ೫ನೇ ಸಾಹಿತ್ಯ ಸಮ್ಮೇಳನದಲ್ಲಿ ಗಡಿಸಮಸ್ಯೆ ಗೋಷ್ಠಿಯ ಅಧ್ಯಕ್ಷತೆಯನ್ನು ವಹಿಸಿ ಗಡಿಭಾಗದ ಶಾಲಾಕಾಲೇಜುಗಳಿಗೆ ಅನುದಾನವನ್ನು ನೀಡಬೇಕೆಂದು ಸರಕಾರಕ್ಕೆ ಒತ್ತಾಯಿಸಿದ್ದಾರೆ. ಹೀಗೆ ಇನ್ನೂ ಹಲವಾರು ಕಾರ್ಯಕ್ರಮಗಳಲ್ಲಿ ಭಾಗವಹಿಸಿ ನುಡಿ-ಗಡಿಜಾಗೃತಿಯ ಬಗೆಗೆ ಹೊಸ ಹೊಸ ಆಲೋಚನೆಗಳನ್ನು ವ್ಯಕ್ತಪಡಿಸಿದ್ದಾರೆ.

**೫. ಕನ್ನಡ ದಿನಪತ್ರಿಕೆಗಳ ಪ್ರಚಾರ:** ಅಲ್ಲಮಪ್ರಭುಗಳು ಚಿಂಚಣಿಯ ಪೀಠಾಧಿಕಾರವನ್ನು ವಹಿಸಿಕೊಂಡಮೇಲೆ ಈ ಭಾಗದಲ್ಲಿ ದಿನನಿತ್ಯ ಬರುವ ಕನ್ನಡ ಮತ್ತು ಮರಾಠಿ ದಿನ

ಪತ್ರಿಕೆಗಳ ಕ್ಷೇತ್ರ ಕಾರ್ಯವನ್ನು ಮಾಡಿದರು. ಕನ್ನಡಕ್ಕಿಂತ ಮರಾಠಿ ಪತ್ರಿಕೆಗಳು ಹೆಚ್ಚಿಗೆ ಇರುವುದು ಕಂಡು ಬಂತು "ಕನ್ನಡ ದಿನಪತ್ರಿಕೆಗಳು ಗಡಿಗ್ರಾಮಗಳಿಗೆ ತಲಪಬೇಕು ಆ ಮೂಲಕ ಕನ್ನಡ ಓದುವ ಹವ್ಯಾಸವನ್ನು ಬೆಳಸಬೇಕು"[೨೪] ಎಂಬ ಇಚ್ಛೆಯಿಂದ ಸ್ವಾಮಿಗಳು ಗಡಿಭಾಗದ ಗ್ರಾಮಗಳಿಗೆ ಕೆಲವು ದಿನ ಕನ್ನಡ ದಿನಪತ್ರಿಕೆಗಳನ್ನು ಉಚಿತವಾಗಿ ಹಂಚಿದರು. ಸರಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಹಾಗೂ ಸಂಘ-ಸಂಸ್ಥೆಗಳಲ್ಲಿ ಕನ್ನಡ ದಿನಪತ್ರಿಕೆಗಳನ್ನು ಕಡ್ಡಾಯವಾಗಿ ತರಿಸುವಂತೆ ಮನವೊಲಿಸಿದರು. ಇದರಿಂದಾಗಿ ಇಂದು ಗಡಿಭಾಗದಲ್ಲಿ ಕನ್ನಡ ವಾತಾವರಣ ಕ್ರಮೇಣವಾಗಿ ನಿರ್ಮಾಣವಾಗುತ್ತಿದೆ.

**೬. ಸಾಹಿತಿ, ವಿದ್ವಾಂಸ ಮತ್ತು ಕಲಾವಿದರಿಗೆ ಪ್ರೋತ್ಸಾಹ:** ಕನ್ನಡಜಾಗೃತಿಯೆಂದರೆ ಕೇವಲ ನಾಡು-ನುಡಿಗಾಗಿ ಹೋರಾಟಮಾಡುವುದಲ್ಲ. ಆ ಭಾಗದ ಸಾಹಿತಿ-ಕಲಾವಿದರನ್ನು ಪ್ರೋತ್ಸಾಹಿಸುವುದು ಕನ್ನಡ ಕೆಲಸವೆಂಬುವುದನ್ನು ಶ್ರೀಗಳು ಅರಿತುಕೊಂಡಿದ್ದಾರೆ. ನಾಡಿನ ಬೇರೆ ಬೇರೆ ಭಾಗದ ಸಾಹಿತಿಗಳನ್ನು ಮಠಕ್ಕೆ ಬರಮಾಡಿಕೊಂಡು ಗೌರವಿಸುತ್ತಿದ್ದಾರೆ. ಎಂ.ಚಿದಾನಂದಮೂರ್ತಿ, ಎಂ.ಎಂ.ಕಲಬುರ್ಗಿ, ಚಂಪಾ, ಎಸ್.ವಿದ್ಯಾಶಂಕರ, ಸಿದ್ದಲಿಂಗ ಪಟ್ಟಣಶೆಟ್ಟಿ, ಪಾಪು, ಏಣಗಿ ಬಾಳಪ್ಪಾ, ಚೆನ್ನವೀರ ಕಣವಿ, ಜಯಂತ ಕಾಯ್ಕಿಣಿ, ಗುರುರಾಜ ಕೆಂಧೂಳಿ ಮುಂತಾದವರನ್ನು ಗೌರವಿಸಿದ್ದಾರೆ. ಡಾ.ಎಂ. ಚಿದಾನಂದ ಮೂರ್ತಿಯವರು ಸಿದ್ಧರಾಮನ ಜನ್ಮಸ್ಥಳವನ್ನು ಕುರಿತು ಸಂಶೋಧನೆ ಕೈಗೊಳ್ಳಲು ಬಂದಾಗ ಶ್ರೀಗಳು ಪ್ರೋತ್ಸಾಹಿಸಿದ್ದಾರೆ. ಅವರ ಸಂಶೋಧನೆಗೆ ವಾಹನದ ವ್ಯವಸ್ಥೆಯನ್ನು ಮಾಡಿ ಡಾ.ಗುರುಪಾದ ಮರಿಗುದ್ದಿಯವರ ಜೊತೆಗೂಡಿ ಚಿದಾನಂದ ಮೂರ್ತಿಯವರ ಸಂಶೋಧನೆಗೆ ಅನುಕೂಲಕಲ್ಪಿಸಿದ್ದಾರೆ. ಚಿಕ್ಕೋಡಿ ಭಾಗದ ಶಾಸನಗಳನ್ನು ಹಾಗೂ ಪ್ರಾಚೀನ ದೇವಾಲಯಗಳನ್ನು ಚಿದಾನಂದ ಮೂರ್ತಿಯವರಿಗೆ ತೋರಿಸುವುದರೊಂದಿಗೆ ಅವರ ಸಂಶೋಧನೆಗೆ ಅವಕಾಶ ಮಾಡಿಕೊಟ್ಟಿದ್ದಾರೆ. ಹೀಗೆ ಇನ್ನೂ ಹಲವಾರು ಸಾಹಿತಿ ವಿದ್ವಾಂಸರಿಗೆ ಪುಸ್ತಕ ಪ್ರಕಟಣೆಗೆ ಧನ ಸಹಾಯವನ್ನು ಒದಗಿಸಿದ್ದಾರೆ. ಈ ಭಾಗದ ಸಾಧಕರನ್ನು ಗುರುತಿಸಿ ಗೌರವಿಸಿದ್ದಾರೆ. ಶ್ರೀ ಬಾಬುರಾವ ದೇಸಾಯಿ, ಡಾ. ಪಿ.ಜಿ. ಕೆಂಪಣ್ಣವರ, ಶ್ರೀ ಎಸ್.ಆರ್. ಡೋಂಗ್ರೆ, ಶ್ರೀ ಭರತ ಕುಂಬಾರ, ಡಾ. ಸಚೀನ ಪಾಟೀಲ ಇನ್ನೂ ಹಲವಾರು ಗಡಿಭಾಗದ ಸಾಧಕರನ್ನು ಗೌರವಿಸುವಲ್ಲಿ ನಿರತರಾಗಿದ್ದಾರೆ. ಹಿರಿ-ಕಿರಿಯ ತಲೆಮಾರಿನ ಎಲ್ಲ ಸಾಹಿತಿ, ವಿದ್ವಾಂಸರ ಮತ್ತು ಕಲಾವಿದರ ಒಡನಾಟವನ್ನು ನಿರಂತರ ಇಟ್ಟುಕೊಂಡಿದ್ದಾರೆ. ಈ ಮಾತಿಗೆ ಶ್ರೀಗಳು ಸಂಗ್ರಹಿಸಿರುವ ಸಾಹಿತಿ ವಿದ್ವಾಂಸರುಗಳ ಪತ್ರಗಳು ಸಾಕ್ಷಿಯನ್ನು ಒದಗಿಸುತ್ತವೆ.

೭. **ಸಾಂಸ್ಕೃತಿಕ ಕಾರ್ಯಕ್ರಮಗಳು:** ಶ್ರೀಗುರುರಾಜ ಕೆಂಧೂಳಿ ಹಾಗೂ ಸಂಗಡಿಗರಿಂದ ಸಂಗೀತ ಸಂಜೆ ಕಾರ್ಯಕ್ರಮವನ್ನು ದಿನಾಂಕ: ೧೦.೦೯.೨೦೦೦ ರಂದು ಆಯೋಜಿಸಿದ್ದರು. ಜನಪದ ನೃತ್ಯಗಳು, ಸಂಗೀತದ ರೂಪಕಗಳ ಪ್ರದರ್ಶನವನ್ನು ೨೧.೧೦.೨೦೦೩ ರಂದು ಏರ್ಪಡಿಸಿದ್ದರು. ಡಾ. ಬಸವರಾಜ ಜಗಜಂಪಿ ಅವರ 'ಜನಪದ ಸಾಹಿತ್ಯದಲ್ಲಿ ಮಕ್ಕಳು' ಎಂಬ ವಿಷಯದ ಉಪನ್ಯಾಸವನ್ನು ೦೬.೦೩.೨೦೦೨ ರಂದು ಆಯೋಜಿಸಿದ್ದರು. ೦೩.೦೪.೨೦೦೬ ರಂದು ಕರ್ನಾಟಕ ಸುವರ್ಣ ಮಹೋತ್ಸವ ಆಚರಣೆ ನಿಮಿತ್ತ ಜನಪದ ಸಾಂಸ್ಕೃತಿಕ ಮೇಳವನ್ನು ಆಯೋಜಿಸಿದ್ದರು. ಈ ಸಂದರ್ಭದಲ್ಲಿ ರಂಗ ಕಲಾವಿದರಾದ ಏಣಗಿ ಬಾಳಪ್ಪನವರು ಉಪಸ್ಥಿತರಿದ್ದರು. ೦೨.೧೧.೨೦೦೧ ರಂದು ಕರ್ನಾಟಕ ದರ್ಶನ-ಪ್ರದರ್ಶನ ಕಾರ್ಯಕ್ರಮವನ್ನು ಏರ್ಪಡಿಸಿ ಕರ್ನಾಟಕದ ಪರಿಚಯವನ್ನು ಗಡಿಜನತೆಗೆ ಮಾಡಿಕೊಟ್ಟಿದ್ದಾರೆ.

ಈ ರೀತಿಯಾಗಿ ಸ್ವಾಮೀಜಿಯವರು ಮಠದಲ್ಲಿ ವಿಶಿಷ್ಟವಾದ ರಾಜ್ಯೋತ್ಸವ ಆಚರಣೆಯ ಮೂಲಕ ನಾಡದೇವಿ ತೇರನ್ನು ವೈಭವಯುತವಾಗಿ ಎಳೆಯುತ್ತಿದ್ದಾರೆ. ವಿವಿಧ ಸ್ಪರ್ಧೆಗಳನ್ನು ಆಯೋಜಿಸಿ ಮಕ್ಕಳಲ್ಲಿ ಮತ್ತು ಯುವಜನತೆಯಲ್ಲಿ ಭಾಷಾಭಿಮಾನವನ್ನು ಬೆಳೆಸುತ್ತಿದ್ದಾರೆ. ಗಡಿನಾಡ ಉತ್ಸವಗಳಲ್ಲಿ ಸಕ್ರೀಯವಾಗಿ ಪಾಲ್ಗೊಂಡು ಕನ್ನಡಾಭಿಮಾನದ ಬೀಜವನ್ನು ಜನತೆಯ ಹೃದಯದಲ್ಲಿ ಬಿತ್ತುತ್ತಿದ್ದಾರೆ. ಸುತ್ತಮುತ್ತ ಕನ್ನಡದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವಂತೆ ಪ್ರೋತ್ಸಾಹಿಸಿ ಅದರಲ್ಲಿ ಪಾಲ್ಗೊಳ್ಳುತ್ತಿದ್ದಾರೆ. ಗಡಿಜನತೆಯಲ್ಲಿ ನಾಡಿನ ಕೆಚ್ಚನ್ನು ಮತ್ತು ಕನ್ನಡ ಜಾಗೃತಿಯನ್ನು ಮೂಡಿಸುತ್ತಿದ್ದಾರೆ. ಗಡಿಭಾಗದಲ್ಲಿ ಕನ್ನಡ ದಿನಪತ್ರಿಕೆಗಳನ್ನು ಉಚಿತವಾಗಿ ಹಂಚುವುದರ ಮೂಲಕ ಗಡಿಜನತೆಯಲ್ಲಿ ಕನ್ನಡ ಪತ್ರಿಕೆ ಮತ್ತು ಪುಸ್ತಕಗಳನ್ನು ಓದುವ ಹವ್ಯಾಸ ಬೆಳೆಸುತ್ತಿದ್ದಾರೆ. ಸಾಂಸ್ಕೃತಿಕ ಕಾರ್ಯಕ್ರಮಗಳ ಮೂಲಕ ನಾಡಸಂಸ್ಕೃತಿಯನ್ನು ಮುಂದುವರೆಸಿಕೊಂಡು ಹೊರಟಿದ್ದಾರೆ. ನಾಡಿನ ಬೇರೆ-ಬೇರೆ ಸಾಹಿತಿ ಕಲಾವಿದರಿಗೆ ಪ್ರೋತ್ಸಾಹ ನೀಡುತ್ತ ಅವರ ಸಾಧನೆಯನ್ನು ಗುರುತಿಸಿ ಸನ್ಮಾನಿಸುತ್ತಿದ್ದಾರೆ. ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆಯ ಎಲ್ಲ ಪುಸ್ತಕಗಳನ್ನು ಕನ್ನಡ ಜಾಗೃತಿಗೆ ಪೂರಕವಾದ ರೀತಿಯಲ್ಲಿ ಬರೆಯಿಸಿ ವಿಶಿಷ್ಟವಾದ ರೀತಿಯಲ್ಲಿ ಬಿಡುಗಡೆ ಮಾಡುತ್ತಿದ್ದಾರೆ. ಧಾರವಾಡ, ಗಜೇಂದ್ರಗಡ, ಚಿಕ್ಕೋಡಿಗಳಲ್ಲಿ ಈ ಮಾಲೆಯ ಕೆಲವು ಕೃತಿಗಳನ್ನು ಬಿಡುಗಡೆಗೊಳಿಸಿದ್ದಾರೆ. ಕನ್ನಡಜಾಗೃತಿ ಪುಸ್ತಕಮಾಲೆಯ ಎಲ್ಲ ಪುಸ್ತಕಗಳಿಗೂ ಹಣವನ್ನು ಗ್ರಂಥದಾನಿಗಳಿಂದ ಪಡೆದುಕೊಂಡಿದ್ದಾರೆ. ಇನ್ನೂ ಹಲವಾರು ರೀತಿಯಲ್ಲಿ ನಾಡದೇವಿಯ ಸೇವೆಯನ್ನು ಶ್ರೀಗಳು ಸದ್ದುಗದ್ದಲವಿಲ್ಲದೆ ಮಾಡುತ್ತಿದ್ದಾರೆ.

**ಹೋರಾಟಗಳು:**

ಅಲ್ಲಮಪ್ರಭು ಸ್ವಾಮಿಗಳು "ಗಡಿಭಾಗದಲ್ಲಿ ಕನ್ನಡ ನಾಡಿನ ಭಾಷೆ, ಸಂಸ್ಕೃತಿಯ ತಿಳುವಳಿಕೆ ನೀಡುವ ಕುರಿತು ನಿರಂತರ ಚಿಂತನೆಮಾಡಿ ಕನ್ನಡ ಜಾಗೃತಿಯನ್ನು ಉಂಟುಮಾಡುವ ಸದುದ್ದೇಶದಿಂದ ಗಡಿಭಾಗದ ಗ್ರಾಮಗಳಾದ ಶಿರದವಾಡ, ಜನವಾಡ, ಚಾಂದಶಿರದವಾಡ, ಡೋಣೆವಾಡಿ, ಬೋರಗಾಂವ, ಕಾರದಗಾ, ಬಾರವಾಡ, ಕುನ್ನೂರ, ಮಾಂಗೂರ, ಮಾನಕಾಪೂರ, ಕಸನಾಳ ಇತರ ಗ್ರಾಮದಲ್ಲಿ ಕನ್ನಡ ವಾತಾವರಣ ನಿರ್ಮಾಣ ಮಾಡಲು ಹಲವಾರು ಯೋಜನೆಗಳನ್ನು ಹಾಕಿಕೊಂಡು ಕಾರ್ಯಕ್ರಮ ಹಮ್ಮಿಕೊಳ್ಳುವರು"[೨೫] ಈ ಮೇಲೆ ಉಲ್ಲೇಖಿತ ಎಲ್ಲ ಗ್ರಾಮಗಳಲ್ಲಿ ಮೊನ್ನೆ ಮೊನ್ನೆಯವರೆಗೆ ಮರಾಠಿ ಭಾಷೆ ಮತ್ತು ಸಂಸ್ಕೃತಿಗಳೇ ಎದ್ದು ಕಾಣುತ್ತಿದ್ದವು. ಅವುಗಳು ತಮ್ಮ ಮೂಲ ಸಂಸ್ಕೃತಿಯನ್ನು, ಪರಂಪರೆಯನ್ನು ಮರೆತು ಬಿಟ್ಟಿದ್ದವು. ಆದರೆ ಇಂದು ಸ್ವಾಮೀಜಿಯವರು ಈ ಎಲ್ಲ ಗ್ರಾಮಗಳ ಜನತೆಯ ಸಹಾಯದಿಂದ ಕನ್ನಡ ಸೈನ್ಯವನ್ನು ಕಟ್ಟಿಕೊಂಡು ಗಡಿಯಲ್ಲಿ ದುಡಿಯುತ್ತಿದ್ದಾರೆ.

ಯಡೂರಿನ ಸ್ವಾಮಿಗಳು, ಚಿಕ್ಕೋಡಿಯ ಸ್ವಾಮಿಗಳು, ಎಕ್ಸಂಬಾದ ಗೆಳೆಯರ ಬಳಗ, ಚಿಕ್ಕೋಡಿಯ ಅಕ್ಕನಬಳಗ, ಕನ್ನಡ ರಕ್ಷಣಾವೇದಿಕೆ, ಚಿಂಚಣಿಯ ಗಡಿಕನ್ನಡಿಗರ ಬಳಗ, ತಾಲೂಕಾ ಕನ್ನಡ ಸಾಹಿತ್ಯ ಪರಿಷತ್ತು ಘಟಕ ಮುಂತಾದ ಸಂಘಟನೆಗಳು ಶ್ರೀ ಅಲ್ಲಮಪ್ರಭು ಸ್ವಾಮಿಗಳ ಮುಂದಾಳತ್ವದಲ್ಲಿ ನಾಡು-ನುಡಿಗೆ ಚ್ಯುತಿಬಂದಾಗ ಈ ಭಾಗದಲ್ಲಿ ಹೋರಾಟ್ಟಕ್ಕಿಳಿಯುತ್ತವೆ. ಸರಕಾರಕ್ಕೆ ಮನವಿಗಳನ್ನು ಅರ್ಪಿಸುತ್ತಿವೆ.

"ಕರ್ನಾಟಕದಲ್ಲಿ ಕನ್ನಡಕ್ಕೆ ಕುತ್ತು ಬಂದಾಗಲೆಲ್ಲ ನಾಡಿನ ಕವಿ-ಸಾಹಿತಿ-ಬುದ್ಧಿ ಜೀವಿಗಳೆಲ್ಲ ಜನರನ್ನು ಸಂಘಟಿಸಿ ಜಾಗೃತಿ ಮೂಡಿಸಿದ್ದಾರೆ. ಪರಭಾಷಾ ಆಕ್ರಮಣದ ವಿರುದ್ಧ ಕತ್ತಿ ಹಿರಿದಿದ್ದಾರೆ. ಸರಕಾರವನ್ನು ನಿದ್ದೆಗೆಡಿಸಿದ್ದಾರೆ. ಕನ್ನಡ ನಾಡು-ನುಡಿ, ನೆಲ-ಜಲಗಳ ಸಮಸ್ಯೆಗಳಿಗೆ ಪರಿಹಾರ ದೊರಕಿಸುವಲ್ಲಿ ಸರಕಾರಕ್ಕಿಂತ ಹೆಚ್ಚಾಗಿ ನಮ್ಮ ನಾಡಿನ ಕನ್ನಡಪರ ಬುದ್ಧಿ ಜೀವಿಗಳು, ಸಂಘಟನೆಗಳು, ಸ್ವಾಮಿಗಳು, ಸಂತರು ಪ್ರಾಮಾಣಿಕ ಕಳಕಳಿಯಿಂದ ಹೋರಾಡಿದ್ದಾರೆ"[೨೬]. ಈ ರೀತಿಯಾಗಿ ಹೋರಾಟ ಮಾಡಿದ ಸ್ವಾಮೀಜಿಯವರೆಂದರೆ; ಹಿಂದಿನ ದಿನಗಳಲ್ಲಿ ನಾಗನೂರು ರುದ್ರಾಕ್ಷಿ ಮಠದ ಲಿಂ. ಡಾ. ಶಿವಬಸವ ಸ್ವಾಮಿಗಳು. ಇಂದಿನ ದಿನಗಳಲ್ಲಿ ಗದುಗಿನ ಜ.ಡಾ. ತೋಂಟದ ಸಿದ್ದಲಿಂಗ ಸ್ವಾಮಿಗಳು, ಬೆಳಗಾವಿ ರುದ್ರಾಕ್ಷಿಮಠದ ಶ್ರೀ ಸಿದ್ಧರಾಮಸ್ವಾಮಿಗಳು, ನಿಡಸೋಸಿಯ ಪಂಚಮ ಶ್ರೀ ಶಿವಲಿಂಗೇಶ್ವರ ಸ್ವಾಮಿಗಳು ಇನ್ನುಳಿದ ಮಠಾಧೀಶರಿಗೆ ಆದರ್ಶರಾಗಿದ್ದಾರೆ.

ಇಂಥ ಕೆಲವೇ ಕೆಲವು ಹೋರಾಟ ಮನೋಭಾವದ ಸ್ವಾಮಿಗಳಲ್ಲಿ ಚಿಂಚಣಿಯ ಶ್ರೀ ಅಲ್ಲಮಪ್ರಭು ಸ್ವಾಮಿಗಳು ಒಬ್ಬರಾಗಿದ್ದಾರೆ. "ರಾಜ್ಯದ ಬಾವುಟ ಹಳದಿ ಮತ್ತು ಕೆಂಪು ಬಣ್ಣವನ್ನು ಹೊಂದಿದ್ದು ಹಳದಿ ಬಣ್ಣ ಶಾಂತಿ, ಕೆಂಪುಬಣ್ಣ

ಕ್ರಾಂತಿಯನ್ನು ಸಾರುತ್ತದೆ. ಹೋರಾಟದ ಮೊದಲು ಶಾಂತಿ, ನಂತರ ಕ್ರಾಂತಿಗೆ ಇಳಿಯಬೇಕು"[೨೭] ಎಂಬುದನ್ನು ಅರಿತುಕೊಂಡ ಸ್ವಾಮಿಗಳು ಹೋರಾಟಕ್ಕೆ ಇಳಿಯುತ್ತಾರೆ. ಚಿಂಚಣಿ ಅಲ್ಲಮಪ್ರಭುಗಳು ನೇತೃತ್ವವಹಿಸಿದ ಪ್ರಮುಖ ಹೋರಾಟಗಳನ್ನು ಹೀಗೆ ಕ್ರೋಢೀಕರಿಸಬಹುದು.

**೧. ಗಡಿವಿವಾದದ ಹಿನ್ನೆಲೆಯಲ್ಲಿ ಕೇಂದ್ರ ಸರಕಾರ ನೀಡಿದ ತೀರ್ಪು ಖಂಡನೆ:** ೪.೧೦.೨೦೦೪ ರಂದು ಕೇಂದ್ರ ಸರಕಾರ ಮಹಾರಾಷ್ಟ್ರದ ಮೇಲ್ಮನವಿಗೆ ಸ್ಪಂದಿಸಿ ಕರ್ನಾಟಕ ಮತ್ತು ಮಹಾರಾಷ್ಟ್ರ ಗಡಿವಿವಾದವನ್ನು ಕುರಿತು ಮಹಾಜನ ವರದಿಗೆ ವಿರುದ್ಧವಾಗಿ ತೀರ್ಪು ನೀಡಿತು. ಇದರಿಂದ ನಿಪ್ಪಾಣಿ, ಬೆಳಗಾವಿ ಮುಂತಾದ ಕರ್ನಾಟಕ ಪ್ರದೇಶಗಳು ಮಹಾರಾಷ್ಟ್ರಕ್ಕೆ ಸೇರಬೇಕೆಂದು ತೀರ್ಮಾನಿಸಲಾಯಿತು. ಇಂತಹ ಕ್ರಮವನ್ನು ಚಿಂಚಣಿಯ ಶ್ರೀಗಳು ಚಿಕ್ಕೋಡಿ ಭಾಗದ ಎಲ್ಲ ಕನ್ನಡಪರ ಸಂಘಟನೆಗಳ ಮೂಲಕ ಖಂಡಿಸಿದರು. "ಕನ್ನಡ ನೆಲ-ಜಲ, ಭಾಷೆಗಳ ಕುರಿತು ಸಮಸ್ಯೆಯುಂಟಾದಾಗ ಕನ್ನಡಕ್ಕೆ ಅನ್ಯಾಯವಾಗದಂತೆ ನೋಡಿಕೊಳ್ಳಲು ನಾವು ಹೋರಾಟ ನಡೆಸುತ್ತೇವೆ. ಗಡಿಭಾಗದ ಬೆಳಗಾವಿ, ನಿಪ್ಪಾಣಿ ಮತ್ತಿತರ ಪ್ರದೇಶಗಳು ಮಹಾರಾಷ್ಟ್ರಕ್ಕೆ ಸೇರಬೇಕೆಂದು ಮಹಾರಾಷ್ಟ್ರ ಸರಕಾರ ಸುಪ್ರಿಂಕೋರ್ಟಿನ ಕಟ್ಟೆ ಹತ್ತಿರುವ ಕ್ರಮವನ್ನು ನಾವು ಖಂಡಿಸುತ್ತೇವೆ. ಗಡಿಭಾಗದಲ್ಲಿನ ಹೊಲಸು ರಾಜಕೀಯ ಕೊನೆಗೊಳ್ಳಬೇಕು, ಮಹಾಜನ ವರದಿ ವಿಷಯದಲ್ಲಿ ಕೇಂದ್ರ ಸರಕಾರ ಬೇಜವಾಬ್ದಾರಿಯಿಂದ ನಡೆದುಕೊಳ್ಳುತ್ತಿದೆ."[೨೮] ಎಂಬುದನ್ನು ಸ್ಪಷ್ಟಪಡಿಸಿ ಕೇಂದ್ರ ಕೈಕೊಂಡ ಕ್ರಮದ ವಿರುದ್ಧ ಹೋರಾಟವನ್ನು ಸಾರಿದ್ದಾರೆ. ಗಡಿವಿವಾದದ ಕುರಿತು ಮಹಾರಾಷ್ಟ್ರ ಸರಕಾರವೇ ನಿಯಮಿಸಿದ ಮಹಾಜನ ವರದಿಯ ತೀರ್ಪನ್ನು ಅವರೇ ಪ್ರಶ್ನಿಸುತ್ತಿರುವುದು ನಿಜಕ್ಕೂ ಒಂದು ನಾಚಿಕೆಗೇಡಿತನದ ವಿಷಯವಾಗಿದೆ. ಕರ್ನಾಟಕ ಮಹಾರಾಷ್ಟ್ರ ಗಡಿಸಮಸ್ಯೆ ಮುಗಿದ ಅಧ್ಯಾಯವಾಗಿದ್ದು ಮಹಾರಾಷ್ಟ್ರೀಯರು ಚುನಾವಣೆ ಬಂದಾಗಲೊಮ್ಮೆ ಈ ಪ್ರಶ್ನೆಯನ್ನು ಜೀವಂತ ಮಾಡಲು ಪ್ರಯತ್ನಿಸುವುದನ್ನು ಸ್ವಾಮಿಗಳು ಅತ್ಯಂತ ಸಮರ್ಥವಾಗಿ ಖಂಡಿಸಿದ್ದಾರೆ. ಕರ್ನಾಟಕ ಸರಕಾರ ನಿಯಮಿಸಿದ ಗಡಿ ಆಯೋಗಕ್ಕೆ ಸ್ವಾಮೀಜಿಯವರು ಕನ್ನಡಪರ ಮಹತ್ವದ ದಾಖಲೆಗಳನ್ನು ಒದಗಿಸಿದ್ದಾರೆ. ಅವುಗಳೆಂದರೆ;

೧. ಕನ್ನಡದಲ್ಲಿರುವ ಕೋರ್ಟಿನ ನೋಟಿಸು ಪ್ರತಿ

೨. ಪೋಸ್ಟ ಮಾಸ್ತರ ಕನ್ನಡದಲ್ಲಿ ನೀಡಿದ ರಾಜಿನಾಮೆ ಪ್ರತಿ

೩. ಕನ್ನಡದ ಕೋರ್ಟ ಫೀ ಸ್ಟಾಂಪುಗಳು

೪. ಕನ್ನಡದ ಉತಾರಗಳ ನಮೂನೆಗಳು

ಇಂತಹ ದಾಖಲೆಗಳನ್ನು ಒದಗಿಸಿ ಆಯೋಗದ ಕಾರ್ಯನಿರ್ವಹಣೆಗೆ ಸಹಾಯನೀಡಿದ್ದಾರೆ. ಹಲವು ಸಂಘ-ಸಂಸ್ಥೆಗಳಿಂದ ಗಡಿ ಆಯೋಗಕ್ಕೆ ಮನವಿ

ಸಲ್ಲಿಸುವಂತೆ ಮನವೊಲಿಸಿದ್ದಾರೆ. ಈ ರೀತಿಯಾಗಿ ಚಿಂಚಣಿ ಶ್ರೀಗಳು ಗಡಿರಕ್ಷಣೆಗೆ ಸದಾ ಸಿದ್ಧರಿದ್ದೇವೆ ಎಂದು ಗರ್ಜಿಸುತ್ತಿದ್ದಾರೆ.

**೨. ಬೆಳಗಾವಿಯ ಮಹಾನಗರಪಾಲಿಕೆಯ ಸೂಪರ್ ಸೀಡ್‌ಗೆ ಒತ್ತಾಯ:** ಬೆಳಗಾವಿಯ ಮಹಾನಗರ ಪಾಲಿಕೆಯಲ್ಲಿ ಮೊದಲಿನಿಂದಲೂ ಎಂ.ಇ.ಎಸ್. ನಾಯಕರು ಕನ್ನಡ ವಿರೋಧಿ ಚಟುವಟಿಕೆಗಳಲ್ಲಿ ನಿರತರಾಗಿದ್ದಾರೆ. ಬೆಳಗಾವಿ ಮಹಾನಗರಪಾಲಿಕೆಯು ಅಕ್ಟೋಬರ ೨೦೦೫ರಂದು ತನ್ನ ಅಧಿವೇಶನದಲ್ಲಿ ಬೆಳಗಾವಿ, ನಿಪ್ಪಾಣಿ, ಚಿಕ್ಕೋಡಿ, ಇನ್ನೂ ಮುಂತಾದ ಕನ್ನಡದ ಗಡಿಪ್ರದೇಶಗಳು ಮಹಾರಾಷ್ಟ್ರಕ್ಕೆ ಸೇರಬೇಕು ಎಂಬ ನಿರ್ಣಯವನ್ನು ಅನುಮೋದಿಸಿ ಪಾಸುಮಾಡಿತು. ಇಂತಹ ನಾಡವಿರುದ್ಧದ ನಿರ್ಣಯವನ್ನು ನೀಡಿರುವ ಬೆಳಗಾವಿಯ ಮಹಾನಗರಪಾಲಿಕೆಯು ತನ್ನ ಅಧಿಕಾರವ್ಯಾಪ್ತಿಯನ್ನು ಮೀರಿ ತೆಗೆದುಕೊಂಡ ಕ್ರಮವನ್ನು ವಿರೋಧಿಸಿ, ಚಿಕ್ಕೋಡಿ ಭಾಗದ ವಿವಿಧ ಕನ್ನಡಪರ ಸಂಘಟನೆಗಳ ನೇತೃತ್ವದಲ್ಲಿ ಅಲ್ಲಮಪ್ರಭು ಸ್ವಾಮಿಗಳು ಹೋರಾಟಕ್ಕಿಳಿದಿದ್ದಾರೆ. "ಗಡಿಯಲ್ಲಿರುವ ಎಲ್ಲ ಮಠಾಧೀಶರ ನೇತೃತ್ವದಲ್ಲಿ ಪ್ರತಿಭಟನೆಯನ್ನು ಹಮ್ಮಿಕೊಳ್ಳಬೇಕಾಗುತ್ತದೆ. ಕನ್ನಡ ನೆಲ-ಜಲ ರಕ್ಷಣೆಯಾಗಬೇಕು. ಬೆಳಗಾವಿ, ನಿಪ್ಪಾಣಿ, ಚಿಕ್ಕೋಡಿ ಮುಂತಾದ ಭಾಗಗಳನ್ನು ಮಹಾರಾಷ್ಟ್ರಕ್ಕೆ ಸೇರಿಸಬೇಕೆಂದು ತೆಗೆದುಕೊಂಡಿರುವ ಬೆಳಗಾವಿಯ ನಗರಪಾಲಿಕೆಯ ನಿರ್ಣಯವು ಸರಿಯಲ್ಲ"[೬೯] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಅಲ್ಲಮಪ್ರಭು ಸ್ವಾಮಿಗಳು ವಿವಿಧ ಸಂಘಟನೆಗಳ ನೇತೃತ್ವದಲ್ಲಿ 'ಬೆಳಗಾವಿಯ ನಗರಪಾಲಿಕೆಯನ್ನು ಸೂಪರ್ ಸೀಡ್ ಮಾಡುವ ಕುರಿತು ಮುಖ್ಯ ಮಂತ್ರಿಗಳಿಗೆ ಮನವಿ' ಯನ್ನು ಸಲ್ಲಿಸಿದ್ದಾರೆ. ಅದರ ಸಾರ ಹೀಗಿದೆ: "ಇತೀಚೆಗೆ ಬೆಳಗಾವಿ ನಗರಪಾಲಿಕೆಯು ತೆಗೆದುಕೊಂಡಿರುವ ನಿರ್ಣಯವು ರಾಜ್ಯದ ಅಖಂಡತೆಗೆ ಮಾರಕ. ತನ್ನ ಅಧಿಕಾರದ ವ್ಯಾಪ್ತಿಯನ್ನು ಮೀರಿ ತೆಗೆದುಕೊಂಡಿರುವ ನಿರ್ಣಯವನ್ನು ನಾಡಿನಾದ್ಯಂತ ಎಲ್ಲ ಕನ್ನಡಪರ ಸಂಘಟನೆಗಳು ಒಕ್ಕೊರಲಿನಿಂದ ಖಂಡಿಸುತ್ತವೆ. ಘನ ಸರಕಾರವು ಸಹ ಈ ವಿಷಯವನ್ನು ಗಂಭೀರವಾಗಿ ತೆಗೆದುಕೊಂಡು ನಾಡ ದ್ರೋಹಿಗಳನ್ನು ಶಿಕ್ಷಿಸಬೇಕೆಂದು ಕೋರುತ್ತೇವೆ"[೭೦] ಎಂದು ವಿವರ ಪೂರ್ಣವಾದ ಮನವಿಯನ್ನು ತಹಶೀಲದಾರರ ಮೂಲಕ ಸರಕಾರಕ್ಕೆ ರವಾನಿಸಿದ್ದಾರೆ.

ಬೆಳಗಾವಿ ಎಂದೆಂದಿಗೂ ಕರ್ನಾಟಕದ್ದೇ. ಅದಕ್ಕೆ ಎಂ.ಇ.ಎಸ್. ಕಾರ್ಯಕರ್ತರು ಭಾಷಾ ಸೌಹಾರ್ದತೆಯಿಂದ ಬಾಳಲು ಕಲಿತುಕೊಳ್ಳಬೇಕೇ ವಿನಃ ಭಾಷಾ ಸಾಮರಸ್ಯಕ್ಕೆ ಧಕ್ಕೆ ಬರುವಂತಹ ಕೆಲಸಮಾಡಿದರೆ ಕನ್ನಡಿಗರು ಸಹಿಸಿಕೊಳ್ಳಲು ಸಾಧ್ಯವಿಲ್ಲ. ಎಂಬ ಎಚ್ಚರಿಕೆಯನ್ನು ಎಲ್ಲ ಸಂಘಟನೆಗಳ ಪರವಾಗಿ ಸ್ವಾಮಿಗಳು ಮರಾಠಿಗರಿಗೆ ನೀಡಿದ್ದಾರೆ. ಇದು ಅಲ್ಲಮಪ್ರಭು ಸ್ವಾಮಿಗಳ ದಿಟ್ಟತನ ಮತ್ತು ಕನ್ನಡ ನಾಡಿನ ಬಗೆಗಿರುವ ಅದಮ್ಯ ಕಾಳಜಿಯನ್ನು ಬಿಂಬಿಸುತ್ತದೆ.

ಹೋರಾಟ ಮತ್ತು ಖಂಡನೆಯ ಜೊತೆಗೆ ಸ್ವಾಮಿಗಳು ಮರಾಠಿಗರಿಗೆ ಕನ್ನಡಿಗರೊಂದಿಗೆ ಸಹಬಾಳ್ವೆಯನ್ನು ನಡೆಸಲು ಸಲಹೆ ನೀಡಿದ್ದಾರೆ. ಕನ್ನಡಿಗರು ಸಹನಶೀಲರು ಹೌದು, ಆದರೆ ಅವರ ಸಹನೆಗೆ ಮತ್ತು ಸ್ವಾಭಿಮಾನಕ್ಕೆ ಧಕ್ಕೆ ತರುವ ಘಟನೆಗಳು ನಡೆಯದಂತೆ ಎಚ್ಚರಿಕೆಯಿಂದ ಇರಬೇಕು. ಮರಾಠಿಗರು ಕನ್ನಡಿಗರ ಸಹನೆಯನ್ನು ದುರುಪಯೋಗ ಮಾಡಿಕೊಳ್ಳಬಾರದೆಂದು ನೇರವಾಗಿ ಗಟ್ಟಿಧ್ವನಿಯಿಂದ ತಿಳಿಸಿದ್ದಾರೆ.

**೩. ಕನ್ನಡ ದಿನಪತ್ರಿಕೆಗಳ ದಹನ ಖಂಡನೆ:** ಮರಾಠಿಯ ಪ್ರದೇಶಗಳಲ್ಲಿ ಮೊದಲಿನಿಂದಲೂ ಕನ್ನಡಕ್ಕೆ ತೊಂದರೆ ಒದಗುತ್ತ ಬಂದಿದೆ. ನವ್ಹೆಂಬರ ೨೦೦೫ ರಂದು ಮಹಾರಾಷ್ಟ್ರದ ಕೊಲ್ಹಾಪೂರ, ಸಾಂಗ್ಲಿ, ಮಿರಜ ಮುಂತಾದ ಪ್ರದೇಶಗಳಲ್ಲಿ ಕನ್ನಡ ದಿನಪತ್ರಿಕೆಗಳನ್ನು ಸುಟ್ಟು ಹಾಕಿದರು ಇಂತಹ ಮರಾಠಿಗರ ದುಷ್ಕ್ರಮವನ್ನು ಚಿಂಚಣಿ ಶ್ರೀಗಳ ನೇತೃತ್ವದಲ್ಲಿ ಎಲ್ಲ ಕನ್ನಡ ಸಂಘಟನೆಗಳು ಖಂಡಿಸಿವೆ. ಮರಾಠಿಗರ ಅಟ್ಟಹಾಸವನ್ನು ಮೆಟ್ಟಿನಿಂತು "ಬೇರೆ ರಾಜ್ಯಗಳಲ್ಲಿ ಕನ್ನಡಿಗರು ಆಯಾಪ್ರದೇಶಕ್ಕೆ ಹೊಂದಿಕೊಂಡಂತೆ ಮರಾಠಿಗರೂ ಸಹ ಹೊಂದಾಣಿಕೆ ಆಗಬೇಕು. ಕನ್ನಡಿಗರ ಸ್ವಾಭಿಮಾನಕ್ಕೆ ಧಕ್ಕೆ ತರುವ ಘಟನೆಗಳು ನಡೆಯದಂತೆ ಎಚ್ಚರವಹಿಸಬೇಕು. ಮರಾಠಿಗರು ಕನ್ನಡಿಗರ ಸಹನೆಯನ್ನು ದುರುಪಯೋಗ ಪಡಿಸಿಕೊಳ್ಳುತ್ತಿದ್ದಾರೆ. ಈ ಬಗ್ಗೆ ಸರಕಾರವು ಯೋಗ್ಯಕ್ರಮ ಕೈಕೊಳ್ಳಬೇಕು"[೩೧] ಎಂಬ ಎಚ್ಚರಿಕೆಯನ್ನು ಮರಾಠಿಗರಿಗೆ ನೀಡಿದ್ದಾರೆ. ಕರ್ನಾಟಕ ಸರಕಾರಕ್ಕೆ ಇಂಥ ಘಟನೆಗಳ ವಿರುದ್ಧ ಸೂಕ್ತಕ್ರಮ ಕೈಗೊಳ್ಳಬೇಕು ಎಂದು ಒತ್ತಾಯಪಡಿಸಿದ್ದಾರೆ.

**೪. ಬೆಳಗಾವಿ ಎರಡನೇ ರಾಜಧಾನಿಯಾಗಬೇಕೆಂದು ಒತ್ತಾಯ:** ಆಡಳಿತದ ದೃಷ್ಟಿಯಿಂದ ಹಾಗೂ ಗಡಿಭಾಗದ ಉಳಿವಿನ ದೃಷ್ಟಿಯಿಂದ ಬೆಂಗಳೂರು ಬಹಳ ದೂರವಿರುವುದರಿಂದಾಗಿ ಬೆಳಗಾವಿಯನ್ನು ಎರಡನೇ ರಾಜಧಾನಿಯನ್ನಾಗಿ ಮಾಡಬೇಕೆಂಬುದು ಉತ್ತರ ಕರ್ನಾಟಕದ ಬಹುದಿನದ ಬೇಡಿಕೆಯಾಗಿದೆ. ಸಪ್ಟೆಂಬರ ೨೦೦೬ ರಂದು ಸರಕಾರವು ಬೆಳಗಾವಿಯನ್ನು ಕರ್ನಾಟಕದ ಎರಡನೇ ರಾಜಧಾನಿಯನ್ನಾಗಿ ಘೋಷಣೆ ಮಾಡಿತು. ಈ ಕ್ರಮವನ್ನು ಎಂ.ಇ.ಎಸ್. (ಮರಾಠಿ) ಸಂಘಟನೆಯು ತೀವ್ರವಾಗಿ ವಿರೋಧಿಸತೊಡಗಿತು. ಇಂತಹ ಸಂದರ್ಭದಲ್ಲಿ ಅಲ್ಲಮಪ್ರಭು ಸ್ವಾಮಿಗಳು ಉತ್ತರಕರ್ನಾಟಕದ ಹಿತದೃಷ್ಟಿಯಿಂದ ಬೆಳಗಾವಿಯನ್ನು ರಾಜದ ಎರಡನೇ ರಾಜಧಾನಿಯನ್ನಾಗಿ ಮಾಡುವಂತೆ ಒತ್ತಾಯಿಸಿ "ಸರಕಾರ ಬೆಳಗಾವಿಯನ್ನು ಉಪರಾಜಧಾನಿಯನ್ನಾಗಿಸುವುದಕ್ಕೆ ಘೋಷಿಸಿರುವುದಕ್ಕೆ ಅಪಸ್ವರ ಬೇಡ. ಅಧಿವೇಶನ, ರಾಜಧಾನಿ ಮಾಡುವದರಿಂದ ಬೆಳಗಾವಿ ಕನ್ನಡದ ಭದ್ರಕೋಟೆಯಾಗಲು ಸಾಧ್ಯ. ಸರಕಾರ ತನ್ನ ನಿಲುವಿನಿಂದ ಹಿಂದೆ ಸರಿದರೆ ಎಂ.ಇ.ಎಸ್. ಬೆಳೆಯಲು ಅವಕಾಶವಾಗಲಿದೆ. ಸರಕಾರ ದಿಟ್ಟ ನಿಲುವಿನ ಮೂಲಕ

ಬೆಳಗಾವಿಯನ್ನು ಉಪರಾಜಧಾನಿಯನ್ನಾಗಿ ಅಭಿವೃದ್ಧಿಪಡಿಸಬೇಕು"[೩೨] ಎಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಚಿಂಚಣಿ ಸ್ವಾಮಿಗಳು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**೫. ಕನ್ನಡ ನುಡಿ–ಕನ್ನಡ ಗಡಿ ಜಾಥಾ:** ೦೩.೦೯.೨೦೦೬ರಂದು ಚಿತ್ರನಟ ಮತ್ತು ಕನ್ನಡ ಹೋರಾಟಗಾರರಾದ ಮು.ಮಂ. ಚಂದ್ರು ಅವರ ನೇತೃತ್ವದಲ್ಲಿ ನಡೆದ ಜಾಥಾವನ್ನು ಅಲ್ಲಮಪ್ರಭು ಸ್ವಾಮಿಗಳು ಉದ್ಘಾಟಿಸಿದರು. "ಗಡಿಕನ್ನಡಿಗರಿಗಾಗಿರುವ ಅನ್ಯಾಯ ಸರಿಪಡಿಸಲು ಗಡಿ ಮೀಸಲಾತಿ ಜಾರಿಗೊಳಿಸಬೇಕು. ಹಾಗೂ ಗಡಿಭಾಗದಲ್ಲಿ ಕನ್ನಡ ಶಾಲೆಗಳನ್ನು ಅನುದಾನಕ್ಕೊಳಪಡಿಸಬೇಕು"[೩೩] ಎಂದು ಸರಕಾರವನ್ನು ಒತ್ತಾಯಿಸಿದ್ದಾರೆ.

**೬. ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ ನೀಡಲು ಒತ್ತಾಯ:** ತಮಿಳುನಾಡಿನ ರಾಜಕೀಯ ಮುಖಂಡರ ಕುತಂತ್ರದಿಂದಾಗಿ ಬಹುದಿನಗಳ ಬೇಡಿಕೆಯಾದ 'ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ' ಈಡೇರದೇ ಇದ್ದಾಗ ಚಿಂಚಣಿ ಶ್ರೀಗಳು ಮತ್ತು ಚಿಕ್ಕೋಡಿಯ ಸಂಪಾದನಾ ಶ್ರೀಗಳು ಪತ್ರಿಕೆಯಲ್ಲಿ ಸಂಸದರಿಗೆ ಬಹಿರಂಗ ಪತ್ರವನ್ನು ಬರೆದು ತಮ್ಮ ಆಕ್ರೋಶವನ್ನು ವ್ಯಕ್ತಪಡಿಸಿದ್ದಾರೆ. "ಕರ್ನಾಟಕ ಏಕೀಕರಣಗೊಂಡು ಐವತ್ತು ವರ್ಷಗಳು ಸಂದರೂ ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನಮಾನ ಸಿಕ್ಕಿಲ್ಲ. ಇದಕ್ಕಾಗಿ ರಾಜ್ಯಾದ್ಯಂತ ಪ್ರತಿಭಟನೆಗಳು ನಡೆದರೂ, ಶಾಸ್ತ್ರೀಯ ಸ್ಥಾನಮಾನ ಮಾತ್ರ ಮರೀಚಿಕೆಯಾಗಿಯೇ ಉಳಿದಿದೆ. ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನ ನೀಡಲು ಕೇಂದ್ರ ಸರ್ಕಾರ ಹಿಂದೇಟು ಹಾಕುತ್ತಿರಲು ಮಾನದಂಡಗಳ ಕೊರತೆ ಕಾರಣವೇ?"[೩೪] ಎಂದು ಪ್ರಶ್ನಿಸುತ್ತಾ ಕನ್ನಡ ಭಾಷೆ ಶಾಸ್ತ್ರೀಯ ಸ್ಥಾನಮಾನ ಹೊಂದಲು ಅರ್ಹತೆ ಹೊಂದಿದೆಯೆಂಬುದನ್ನು ಆಧಾರಗಳೊಂದಿಗೆ ಪ್ರತಿಪಾದಿಸಿದ್ದಾರೆ. ಕನ್ನಡ ಭಾಷೆ ಸಂವಿಧಾನ ಬದ್ಧವಾಗಿದ್ದು ಸುಮಾರು ೨೫೦೦ ವರ್ಷಗಳ ಇತಿಹಾಸವನ್ನು ಹೊಂದಿದೆ. ಭಾರತದಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ಕೊಡಮಾಡುವ ಜ್ಞಾನಪೀಠ ಪ್ರಶಸ್ತಿಯು ಅತ್ಯುನ್ನತವಾದುದು. ಇದುವರೆಗೆ ಕನ್ನಡಕ್ಕೆ ಏಳು ಜ್ಞಾನಪೀಠ ಪ್ರಶಸ್ತಿಗಳು ಲಭಿಸಿವೆ. ಇನ್ನೂ ಹಲವಾರು ಮಹತ್ವದ ಅಂಶಗಳನ್ನು ಸ್ವಾಮೀಜಿಯವರು ಬಹಿರಂಗ ಪತ್ರದಲ್ಲಿ ವ್ಯಕ್ತಪಡಿಸಿದ್ದಾರೆ.

**೭. ಮಹಾರಾಷ್ಟ್ರದ ಉಪಮುಖ್ಯಮಂತ್ರಿಯ ಹೇಳಿಕೆಯ ಖಂಡನೆ:** ಮಹಾರಾಷ್ಟ್ರದ ಉಪ–ಮುಖ್ಯಮಂತ್ರಿಗಳು ಕರ್ನಾಟಕದಲ್ಲಿ ಮರಾಠಿ ಭಾಷಿಕರಮೇಲೆ ದೌರ್ಜನ್ಯ ನಡೆಯುತ್ತಿದೆ ಎಂಬ ಹೇಳಿಕೆಯನ್ನು ನೀಡಿದರು. ಈ ಹೇಳಿಕೆಯನ್ನು ಸ್ವಾಮೀಜಿಯವರು ವಿವಿಧ ಸಂಘಟನೆಗಳ ಪರವಾಗಿ ಬಲವಾಗಿ ಖಂಡಿಸಿದ್ದಾರೆ.

**೮. ಮಹಾಜನ ವರದಿಯ ಯಥಾವತ್ತಾದ ಅನುಷ್ಠಾನಕ್ಕೆ ಒತ್ತಾಯ:** ಮಹಾರಾಷ್ಟ್ರದ ಸರಕಾರವು ಕೇಂದ್ರಕ್ಕೆ ಸಲ್ಲಿಸಿದ ಗಡಿವಿವಾದ ಕುರಿತು ಮೇಲ್ಮನವಿಗೆ ಜಗ್ಗದೆ ಕರ್ನಾಟಕ ಸರಕಾರವು ಸುಪ್ರೀಂ ಕೋರ್ಟಿನಲ್ಲಿ ತನ್ನ ನಿಲುವನ್ನು ಸಮರ್ಥಿಸಿಕೊಳ್ಳಬೇಕು ಎಂಬ

ಉದ್ದೇಶದಿಂದ ಚಿಕ್ಕೋಡಿ ಭಾಗದ ಎಲ್ಲ ಕನ್ನಡಪರ ಸಂಘಟನೆಗಳು ೦೪.೧೦.೨೦೦೬ ರಂದು ಕರ್ನಾಟಕಬಂದ ಸಂದರ್ಭದಲ್ಲಿ ಚಿಕ್ಕೋಡಿಯನ್ನು ಸಂಪೂರ್ಣ ಬಂದ ಮಾಡಿ "ಕನ್ನಡಿಗರು ಸಹನಶೀಲರು ಅವರು ಸಹನೆ ಕಳೆದುಕೊಳ್ಳುವುದಕ್ಕಿಂತ ಮುಂಚೆ ಮಹಾಜನ ವರದಿಯನ್ನು ಯಥಾವತ್ತಾಗಿ ಜಾರಿಗೆ ತರಬೇಕು"[೩೫] ಎಂಬ ಎಚ್ಚರಿಕೆಯನ್ನು ಸರಕಾರಕ್ಕೆ ನೀಡಿವೆ.

ಇವುಗಳಲ್ಲದೆ ಕಳಸಾಬಂಡೂರಿ ನಾಲಾಯೋಜನೆ ಪ್ರಾರಂಭಿಸುವಿಕೆಯ ವಿಳಂಬನೀತಿ, ಕಾವೇರಿ ಜಲವಿವಾದ, ಉತ್ತರ ಕರ್ನಾಟಕ್ಕೆ ಹೈಕೋರ್ಟಪೀಠ, ಆಡಳಿತದಲ್ಲಿ ಪೂರ್ಣ ಪ್ರಮಾಣದಲ್ಲಿ ಕನ್ನಡ ಅನುಷ್ಠಾನ, ಗಡಿಕನ್ನಡ ಶಾಲೆಗಳ ಸ್ಥಿತಿ–ಗತಿ ಸುಧಾರಣೆ, ಕನ್ನಡ ಶಿಕ್ಷಕರ ನೇಮಕ ಮುಂತಾದ ಸಂದರ್ಭದಲ್ಲಿ ಚಿಕ್ಕೋಡಿ ತಾಲೂಕಿನ ಎಲ್ಲ ಸಂಘಟನೆಗಳ ಪರವಾಗಿ ಚಿಕ್ಕೋಡಿ ಮತ್ತು ಯಡೂರಿನ ಶ್ರೀಗಳ ಜೊತೆಗೂಡಿ ಅಲ್ಲಮಪ್ರಭು ಸ್ವಾಮಿಗಳು ಪ್ರತಿಭಟನೆಯನ್ನು ಕೈಗೊಂಡು ಸರಕಾರಕ್ಕೆ ಮನವಿಗಳನ್ನು ಅರ್ಪಿಸಿದ್ದಾರೆ. ಈ ರೀತಿಯಾಗಿ ಅಲ್ಲಮಪ್ರಭು ಸ್ವಾಮಿಗಳು ನಾಡು–ನುಡಿಯ ವಿಷಯ ಬಂದಾಗ ತಮ್ಮದೇಯಾದ ದಿಟ್ಟ ನಿಲುವನ್ನು ವ್ಯಕ್ತಪಡಿಸಿ ಸಾಂದರ್ಭಿಕವಾಗಿ ತಮ್ಮ ಹೇಳಿಕೆಗಳನ್ನು ನೀಡಿದ್ದಾರೆ. ಪತ್ರಿಕೆಗಳಲ್ಲಿ ಬಹಿರಂಗ ಪತ್ರಗಳನ್ನು ಬರೆದಿದ್ದಾರೆ. ಅವಶ್ಯವಿದಾಗ ಗಡಿಆಯೋಗಕ್ಕೆ ಮತ್ತು ಸರಕಾರಕ್ಕೆ ತಮ್ಮ ಬಳಿಯಿರುವ ಮಹತ್ವ ಪೂರ್ಣವಾದ ಕನ್ನಡ ದಾಖಲೆಗಳನ್ನು ನೀಡಿದ್ದಾರೆ. ಈ ಎಲ್ಲ ಹೋರಾಟಗಳನ್ನು ಮತ್ತು ವಿಭಿನ್ನ ರೀತಿಯ ಕನ್ನಡ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ಚಿಂಚಣಿ ಸ್ವಾಮಿಗಳು ಚಿಕ್ಕೋಡಿ ಗಡಿಭಾಗದ ಓರ್ವ ಪ್ರಮುಖ ಕನ್ನಡ ಸ್ವಾಮೀಜಿ ಹಾಗೂ ಕನ್ನಡ ಹೋರಾಟಗಾರರಾಗಿ ಕಂಡುಬರುತ್ತಾರೆ.

**ಕನ್ನಡಪರ ಸಂಘಟನೆ – ಸಂಸ್ಥೆಗಳು:**

ಚಿಂಚಣಿ ಮಠ 'ಕನ್ನಡ–ಕನ್ನಡಿಗ–ಕರ್ನಾಟಕ' ಎಂಬ ಘೋಷಣೆಯನ್ನು ಮಠದ ಮಂತ್ರವನ್ನಾಗಿಸಿಕೊಂಡಿದೆ. ಕನ್ನಡಿಗರಿಗೆ ಸ್ಫೂರ್ತಿ ಮತ್ತು ಕೆಚ್ಚನ್ನು ಮೂಡಿಸುವ ಗುರುತರವಾದ ಹೊಣೆಯನ್ನು ನಿರ್ವಹಿಸುತ್ತಿದೆ. ಈ ಮಠವು ಕನ್ನಡ ನಾಡು–ನುಡಿಯ ರಕ್ಷಣೆಗಾಗಿ ಹಲವಾರು ಸಂಘಸಂಸ್ಥೆಗಳನ್ನು ಕಟ್ಟಿಕೊಂಡು 'ಕನ್ನಡಮಠ'ವಾಗಿ ಮೆರೆಯುತ್ತಿದೆ. ಕನ್ನಡಪರ ಕಳಕಳಿಯನ್ನು ಹೊಂದಿದ ಸ್ವಾಮಿಗಳು 'ಕನ್ನಡ ಸ್ವಾಮೀಜಿ' ಎಂಬ ಅಭಿದಾನಕ್ಕೆ ಪಾತ್ರರಾಗಿದ್ದಾರೆ. ಇಂತಹ ಸ್ವಾಮೀಜಿಯವರು ಕಟ್ಟಿಕೊಂಡ ಸಂಘ–ಸಂಸ್ಥೆಗಳು ಇಂತಿವೆ,

೧. **ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ:** ಅಲ್ಲಮಪ್ರಭು ಸಿದ್ಧಸಂಸ್ಥಾನಮಠದ ಕಾರ್ಯಕ್ಷೇತ್ರವನ್ನು ವಿಶಾಲಗೊಳಿಸಿ ಜನತೆಯ ಯೋಗಕ್ಷೇಮಕ್ಕಾಗಿ ಈ ಸಂಸ್ಥೆಯನ್ನು ಶ್ರೀಗಳು ಕಟ್ಟಿಕೊಂಡಿದ್ದಾರೆ. ಇದರ ಮೂಲಕ ಅಲ್ಲಮಪ್ರಭು ಕೈಗಾರಿಕಾ ಕೇಂದ್ರ,

ಬಾಳಿನಬುತ್ತಿ ಕಲಿಕಾಕೇಂದ್ರ ಮತ್ತು ಕನ್ನಡ ಜಾಗೃತಿ ಪುಸ್ತಕಮಾಲೆ ಕಾರ್ಯಾರಂಭ ಮಾಡಿವೆ. ಹೀಗೆ ವಿವಿಧ ಉದ್ದೇಶಗಳನ್ನಿಟ್ಟುಕೊಂಡು ಸಂಸ್ಥೆ ೧೯೯೭ ರಂದು ಜನ್ಮ ತಾಳಿದೆ. ಈ ಸಂಸ್ಥೆಯ ಉದ್ದೇಶಗಳಲ್ಲಿ ಪುಸ್ತಕ ಪ್ರಕಾಶನವು ಒಂದು. ಇದರ ಮೂಲಕ 'ಕನ್ನಡಜಾಗೃತಿ ಪುಸ್ತಕಮಾಲೆ'ಯನ್ನು ಆರಂಭಿಸಿದ್ದಾರೆ. ಇದುವರೆಗೆ ೨೩ ನಾಡು-ನುಡಿ ಜಾಗೃತಿಯನ್ನುಂಟುಮಾಡುವ ಕೃತಿಗಳನ್ನು ಪ್ರಕಟಿಸಿದೆ. "ಜನಕಲ್ಯಾಣದ ಒಂದು ಭಾಗ ಕನ್ನಡ ಜಾಗೃತಿ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಜ್ಞಾನ (Knowledge) ಬೇರೆ, ಕನ್ನಡ ಜಾಗೃತಿ (Awareness) ಬೇರೆ. ಈ ಹಿನ್ನೆಲೆಯಲ್ಲಿ ಹೇಳುವುದಾದರೆ ಶ್ರೀಮಠ ಪ್ರಕಟಿಸುತ್ತಿರುವ ಪುಸ್ತಕಗಳು ಕನ್ನಡ ಜ್ಞಾನ ಪ್ರಸಾರಕ್ಕಿಂತ ಕನ್ನಡಿಗರನ್ನು ಜಾಗೃತಿಗೊಳಿಸುವ ಧೋರಣೆಯನ್ನು ಹೊಂದಿವೆ"[೩೬] ಖ್ಯಾತ ಸಂಶೋಧಕರಾದ ಎಂ.ಎಂ. ಕಲಬುರ್ಗಿ, ಎಂ.ಚಿದಾನಂದಮೂರ್ತಿ, ಚಂಪಾ, ಸಿದ್ಧಲಿಂಗ ಪಟ್ಟಣಶೆಟ್ಟಿ, ಎಸ್.ವಿದ್ಯಾಶಂಕರ, ಅವರ ಮಾರ್ಗದರ್ಶನದಲ್ಲಿ ಕನ್ನಡಜಾಗೃತಿ ಪುಸ್ತಕಮಾಲೆ ನಿರಂತರವಾಗಿ ಮುಂದುವರೆಯುತ್ತಿದೆ. ಡಾ.ಗುರುಪಾದ ಮರಿಗುದ್ದಿ, ಡಾ.ವ್ಹಿ.ಎಸ್. ಮಾಳಿ, ಡಾ.ಎಂ.ಬಿ. ಹೂಗಾರ, ಪ್ರೊ.ಚಂದ್ರಕಾಂತ ಪೋಕಳೆ, ಡಾ.ಎಸ್.ವಾಯ್. ಹಂಜಿ, ಡಾ.ಪಿ.ಜಿ. ಕೆಂಪಣ್ಣವರ, ಪ್ರೊ. ಸುಬ್ಬರಾವ ಎಂಟೆತ್ತಿನವರ, ಡಾ. ಅನಿಲ ಕಮತೆ ಅವರ ನಿರ್ದೇಶನದಮೇರೆಗೆ ಕನ್ನಡಜಾಗೃತಿ ಪುಸ್ತಕಮಾಲೆ ಕಾರ್ಯ ನಿರ್ವಹಿಸುತ್ತಿದೆ. "ಅಕ್ಷರ ಲೋಕದ ಮೂಲಕ ಕನ್ನಡ ಕೈಂಕರ್ಯಮಾಡುವ ಸದುದ್ದೇಶದಿಂದ ಶ್ರೀಮಠದ ಅಂಗಸಂಸ್ಥೆಯಾದ ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆಯ ಮೂಲಕ 'ಕನ್ನಡ ಜಾಗೃತಿ ಪುಸ್ತಕಮಾಲೆ'ಯನ್ನು ಪ್ರಾರಂಭಿಸಿದೆ. ಉಳಿದ ಪ್ರಕಾಶನಗಳಿಗಿಂತ ಈ ಸಂಸ್ಥೆ ತೀರಾ ಭಿನ್ನವಾಗಿದೆ. ಕೇವಲ ನಾಡು-ನುಡಿಪರ ವಿಷಯವಸ್ತುವನ್ನೊಳಗೊಂಡ ಕೃತಿಗಳನ್ನು ಮಾತ್ರ ಪ್ರಕಟಿಸುತ್ತಿದೆ. ಶ್ರೀಗಳು ಈ ಸಂಸ್ಥೆಯ ಮೂಲಕ ಕೈಗೊಂಡಿರುವ ಕಾರ್ಯವು ಸರಕಾರ ಅಸ್ತಿತ್ವಕ್ಕೆ ತಂದಿರುವ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಕೆಲಸಕ್ಕೆ ಪೂರಕವೆನಿಸಿದೆ"[೩೭] ಈ ಪ್ರಕಾಶನದ ಮೂಲಕ ೧೯೯೭ ರಿಂದ ಪ್ರತಿವರ್ಷ ಒಂದಾದರೂ, ಒಂದೊಂದು ವರ್ಷ ೩-೫ ಪುಸ್ತಕಗಳನ್ನು ಪ್ರಕಟಿಸಿರುವರು. ಎಲ್ಲವೂ ಕನ್ನಡಪರ ಪುಸ್ತಕಗಳೇ ಆಗಿರುವುದು ವಿಶೇಷವೆನಿಸಿದೆ. ಸರಕಾರ ಈ ಪ್ರಕಟಣೆಯ ೫ ಕೃತಿಗಳ ತಲಾ ೮೦ (೪೦೦) ಪುಸ್ತಕಗಳನ್ನು ವಿಧಾನ ಪರಿಷತ್ತಿನ ಎಲ್ಲ ಸದಸ್ಯರಿಗೆ ಓದಲು ಖರೀದಿಸಿದೆ. ಈ ಎಲ್ಲ ಪ್ರಕಟನೆಗಳು ವಿಶ್ವವಿದ್ಯಾಲಯದ ಪ್ರಕಟನೆಗಳಿಗೆ ಸರಿಸಾಟಿಯಾಗಿ ನಿಲ್ಲುತ್ತವೆ. ಈ ಕೃತಿಗಳೆಲ್ಲವೂ ಗ್ರಂಥದಾನಿಗಳ ವ್ಯಾಪಕ ಸಹಕಾರದಿಂದ ಪ್ರಕಟಕೊಳ್ಳುತ್ತಿವೆ.

**೨. ಗಡಿಕನ್ನಡಿಗರ ಬಳಗ:** ಗಡಿಯಲ್ಲಿ ಕನ್ನಡದ ಯೋಗಕ್ಷೇಮವನ್ನು ನೋಡಿಕೊಂಡು ಹೋಗುವುದು ಶ್ರೀಮಠದ ಒಂದು ಮಹತ್ವದ ಕಾರ್ಯವಾಗಿದೆ. ಇಂಥ ಕಾರ್ಯವನ್ನು

ಒಬ್ಬ ವ್ಯಕ್ತಿಯಿಂದ ಮಾಡಲು ಸಾಧ್ಯವಿಲ್ಲ ಎಂದು ತಿಳಿದ ಸ್ವಾಮಿಗಳು ಯುವಜನತೆಯ ಒಂದು ಪಡೆಯನ್ನೇ ಚಿಂಚಣಿ ಗ್ರಾಮದಲ್ಲಿ ಕಟ್ಟಿದ್ದಾರೆ. ಅದುವೇ ಗಡಿಕನ್ನಡಿಗರ ಬಳಗವಾಗಿ ಪ್ರಸಿದ್ಧಿ ಪಡೆದಿದೆ. ೧೯೯೭ ರಲ್ಲಿ ಶ್ರೀಗಳ ನೇತೃತ್ವದಲ್ಲಿ ಬಳಗವು ಅಸ್ತಿತ್ವಕ್ಕೆ ಬಂತು. ೧೯೯೮ ರಲ್ಲಿ ಖ್ಯಾತ ಕಾದಂಬರಿಕಾರರಾದ ರಂ.ಶಾ. ಲೋಕಾಪೂರ ಅವರ ಅಧ್ಯಕ್ಷತೆಯಲ್ಲಿ ಈ ಬಳಗವು ಕನ್ನಡ ಕಾರ್ಯಚಟುವಟಿಕೆಗಳನ್ನು ಪ್ರಾರಂಭಿಸಿತು. ಅಂದಿನಿಂದ ಇಂದಿನವರೆಗೆ ಈ ಬಳಗವು ಕನ್ನಡ ರಕ್ಷಣೆಗೆ ಸದಾ ಸಿದ್ಧವಿದೆ. ೧೯೯೯ರಿಂದ ಇಲ್ಲಿಯವರೆಗೆ ೦೯ ರಾಜ್ಯೋತ್ಸವಗಳನ್ನು ಶ್ರೀಮಠದಲ್ಲಿ ವಿಶೇಷವಾದ ರೀತಿಯಲ್ಲಿ ಆಚರಿಸಿದೆ. ಕರ್ನಾಟಕದ ಬೇರೆ ಬೇರೆ ಪ್ರದೇಶದ ಸಾಹಿತಿ ವಿದ್ವಾಂಸರನ್ನು ಚಿಂಚಣಿ ಭಾಗಕ್ಕೆ ಪರಿಚಯಿಸಿದೆ. ಎಂ.ಚಿದಾನಂದಮೂರ್ತಿ, ಎಂ.ಎಂ.ಕಲಬುರ್ಗಿ, ಚಂಪಾ, ಸಿದ್ಧಲಿಂಗ ಪಟ್ಟಣಶೆಟ್ಟಿ, ಪಾಪು, ಎಸ್.ವಿದ್ಯಾಶಂಕರ, ಚೆನ್ನವೀರ ಕಣವಿ, ಜಯಂತ ಕಾಯ್ಕಿಣಿ, ಚಲನಚಿತ್ರ ಕಲಾವಿದ ಹಾಗೂ ಕನ್ನಡ ಹೋರಾಟಗಾರರಾದ ಮು.ಮಂ. ಚಂದ್ರು ಇನ್ನೂ ಹಲವಾರು ವಿದ್ವಾಂಸರನ್ನು ಗಡಿಕನ್ನಡಿಗರ ಬಳಗದ ಕಾರ್ಯಕ್ರಮಗಳಿಗೆ ಆಹ್ವಾನಿಸಿ ಅವರ ಚಿಂತನೆಗಳನ್ನು ಗಡಿಜನತೆಗೆ ಉಣಬಡಿಸಿದೆ. ಇದರ ಜೊತೆಗೆ ಮಹಾಜನ ವರದಿ ಅನುಷ್ಠಾನ, ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ, ಕಳಸಾಬಂಡೂರಿ ನಾಲಾಯೋಜನೆ ಮುಂತಾದ ಹೋರಾಟಗಳಲ್ಲಿ ಪಾಲ್ಗೊಳ್ಳುವ ಮೂಲಕ ಕನ್ನಡದ ಗಡಿಯಲ್ಲಿ ನಿಂತು ಸರಕಾರಕ್ಕೆ ಎಚ್ಚರಿಕೆಯ ಗಂಟೆಯನ್ನು ನೀಡುತ್ತಿದೆ. ಭರತ ಕುಂಬಾರ ಅವರು ಇದರ ಅಧ್ಯಕ್ಷರಾಗಿ ಬಳಗವನ್ನು ಮುಂದುವರಿಸಿಕೊಂಡು ನಡೆದಿದ್ದಾರೆ. ಇದರೊಂದಿಗೆ ಇನ್ನೂ ಹಲವಾರು ಕಾರ್ಯಕ್ರಮಗಳನ್ನು ಈ ಬಳಗವು ಹಮ್ಮಿಕೊಳ್ಳುತ್ತಿದೆ. ಅವುಗಳೆಂದರೆ:

೧. ವಿದ್ಯಾರ್ಥಿಗಳಿಗೆ ಮತ್ತು ಯುವಕರಿಗೆ ವಿವಿಧ ಸ್ಪರ್ಧೆಗಳು

೨. ಸಾರ್ವಜನಿಕರಿಗೆ ಉಚಿತ ಆರೋಗ್ಯ ತಪಾಸನೆ

೩. ಪರಿಸರ ಜಾಗೃತಿ

೪. ವ್ಯಸನ ಮುಕ್ತ ಚಳುವಳಿ

೫. ಸಾಂಸ್ಕೃತಿಕ ಮತ್ತು ಸಾಹಿತ್ಯಿಕ ಕಾರ್ಯಕ್ರಮಗಳು.

ಹೀಗೆ ಗಡಿಭಾಗದಲ್ಲಿ ನಿತ್ಯ ಕನ್ನಡ ಚಟುವಟಿಕೆಗಳನ್ನು ಏರ್ಪಡಿಸುವ ಮೂಲಕ ಈ ಪರಿಸರದಲ್ಲಿ ಕನ್ನಡ ಬಾವುಟವು ನಿತ್ಯ ಹಾರಾಡುವಂತೆ ನೋಡಿಕೊಳ್ಳುತ್ತಿದೆ. ಈ ಎಲ್ಲ ಕಾರ್ಯಗಳಿಗೆ ಸ್ವಾಮಿಗಳು ಮಾರ್ಗದರ್ಶಕರು ಮತ್ತು ಪ್ರೇರಕ ಶಕ್ತಿಯಾಗಿ ನಿಂತಿದ್ದಾರೆ.

**೩. ಬಾಳಿನ ಬುತ್ತಿ ಕಲಿಕಾ ಕೇಂದ್ರ :** ೧೦ ವರ್ಷಗಳ ಕಾಲ ಶ್ರೀಮಠದ ಆಶ್ರಯದಲ್ಲಿ ವಿದ್ಯಾರ್ಥಿಗಳಿಗಾಗಿ ಒಂದು ಕೇಂದ್ರವನ್ನು ಶ್ರೀಗಳು ನಡೆಸಿದ್ದರು. ವಿದ್ಯಾರ್ಥಿಗಳ ಶಾಲೆಯ ವೇಳೆಗೆ ವ್ಯತ್ಯಯವಾಗದಂತೆ ಮುಂಜಾನೆ ಮತ್ತು ಸಂಜೆಯ ವೇಳೆ

ಪಾಠವನ್ನು ಹೇಳಿಕೊಡಲಾಗುತ್ತಿತ್ತು. ವಿದ್ಯಾರ್ಥಿಗಳ ಬಾಳಿಗೆ ಒಂದು ಜ್ಞಾನದ ಬುತ್ತಿಯನ್ನು ಕಟ್ಟಿಕೊಡುವ ನಿಟ್ಟಿನಲ್ಲಿ ಈ ಕೇಂದ್ರವು ಕಾರ್ಯಪ್ರವೃತ್ತವಾಗಿತ್ತು. ಸ್ವಾಮಿಗಳು ಕೇವಲ ದೊಡ್ಡವರ ಬಗೆಗೆ ಚಿಂತಿಸುವವರಲ್ಲ. ಅವರ ಮಕ್ಕಳಪರವಾದ ಕಾಳಜಿ ಅನುಪಮವಾದದ್ದು. ಬಡಮಕ್ಕಳನ್ನು ಮಠದೊಳಗೆ ಇಟ್ಟುಕೊಂಡು ಅವರ ವಿದ್ಯಾರ್ಥಿ ಬದುಕಿಗೆ ಮುಂಬತ್ತಿಯಾಗಿದ್ದಾರೆ. ಈ ಕೇಂದ್ರದ ಮೂಲಕ ಮಕ್ಕಳಿಗೆ ಕನ್ನಡ ಸಾಹಿತ್ಯ, ಸಂಸ್ಕೃತಿ ಮತ್ತು ಇತಿಹಾಸದ ಬಗ್ಗೆ ತಿಳುವಳಿಕೆ ಹಾಗೂ ಅಭಿಮಾನವನ್ನು ತುಂಬುವ ನಿಟ್ಟಿನಲ್ಲಿ ಕಾರ್ಯೋನ್ಮುಖವಾಗಿದ್ದಾರೆ. ಕವಿಗಳ ಹೆಸರು, ಕೃತಿಗಳು, ಕನ್ನಡ ನಾಡಿನ ಪ್ರಾಚೀನತೆ ಮತ್ತು ಭವ್ಯತೆಯನ್ನು ಕುರಿತು ಮಕ್ಕಳಿಗೆ ತಿಳುವಳಿಕೆಯನ್ನು ನೀಡುತ್ತಿದ್ದಾರೆ. "ಈ ಮಠದಲ್ಲಿ ಸ್ವಾಮೀಜಿಯವರು ಸಂಘಟಿಸಿದ ಬಾಳಿನಬುತ್ತಿ ಕಲಿಕಾಕೇಂದ್ರದ ಮಕ್ಕಳ ಜ್ಞಾನ ಸಂಪನ್ನತೆಯಂತೂ ನಮ್ಮನ್ನು ಬೆರಗುಗೊಳಿಸಿ ಬಿಟ್ಟಿತು. ನಿತ್ಯದ ಶಾಲೆಯ ಅವಧಿಗೆ ಚ್ಯುತಿಬಾರದಂತೆ ನಡೆಸಿಕೊಂಡುಹೋಗುತ್ತಿರುವ ಈ ಕಲಿಕಾ ಕೇಂದ್ರಕ್ಕೆ ಗುರು ಒಬ್ಬ ಮುಸಲ್ಮಾನ ಬಂದು!"[೩೮] ಯಾವುದೇ ಪ್ರಶ್ನೆಗಳನ್ನು ಕೇಳಿದರು ಈ ಮಕ್ಕಳು ಸಲೀಸಾಗಿ ಉತ್ತರಿಸುತ್ತಾರೆ. ಈ ಮಕ್ಕಳ ಬುದ್ಧಿಮಟ್ಟ ಎಂಥವರನ್ನೂ ಬೆರಗುಗೊಳಿಸುತ್ತದೆ. ಈ ರೀತಿಯಾದ ಶೈಕ್ಷಣಿಕ ಪ್ರಯೋಗವನ್ನು ಚಿಂಚಣಿ ಮಠವನ್ನು ಬಿಟ್ಟರೆ ಬೇರೆ ಯಾವ ಮಠದಲ್ಲಿಯೂ ಕಾಣುವದಿಲ್ಲ. ಇಲ್ಲಿ ಎಲ್ಲ ಜಾತಿಯ ಮಕ್ಕಳು ಕೂಡಿಕೊಂಡು ಅಧ್ಯಯನಮಾಡುತ್ತಿದ್ದರು. ಪ್ರತಿನಿತ್ಯ ಮಕ್ಕಳೆಲ್ಲ ಸೇರಿ ಸರ್ವಧರ್ಮ ಪ್ರಾರ್ಥನೆಯನ್ನು ಮಾಡುತ್ತಿದ್ದರು. ಈ ಮೂಲಕ ಸ್ವಾಮೀಜಿಯವರು ಮಕ್ಕಳಲ್ಲಿ ಐಕ್ಯತೆಯನ್ನು ಮೂಡಿಸುವ ನಿಟ್ಟಿನಲ್ಲಿ ಕಲಿಕಾ ಕೇಂದ್ರದ ಮೂಲಕ ಪ್ರಯತ್ನಿಸಿದ್ದಾರೆ. ಈ ಕಲಿಕಾಕೇಂದ್ರದಲ್ಲಿ ಸುಮಾರು ೩೦ ಮಕ್ಕಳು ವಿದ್ಯಾಭ್ಯಾಸ ಮಾಡುತ್ತಿದ್ದರು. ಬಾಳಬುತ್ತಿ ಕಲಿಕಾ ಕೇಂದ್ರದ ಮೂಲಕ ಸ್ವಾಮೀಜಿಯವರು ಮಕ್ಕಳ ಬದುಕಿಗಾಗಿ ಶ್ರಮಿಸುತ್ತಿರುವುದನ್ನು ಗಮನಿಸಿ ೨೦೦೨ರಲ್ಲಿ ಧಾರವಾಡದ ಚಿಲಿಪಿಲಿ ಪ್ರಕಾಶನವು ಸ್ವಾಮೀಜಿಯವರಿಗೆ 'ಶಿಕ್ಷಣ ಸಿರಿ ಪ್ರಶಸ್ತಿ' ಯನ್ನು ನೀಡಿ ಗೌರವಸಿದೆ.

ಇವುಗಳೊಂದಿಗೆ ಶ್ರೀಮಠದ ಆವರಣದಲ್ಲಿ ಒಂದು ಗೋಶಾಲೆ ಇದೆ. ಇದರಲ್ಲಿ ಸುಮಾರು ೬-೭ ಜಾತಿಯ ಆಕಳುಗಳು ಕಾಣಸಿಗುತ್ತವೆ. ಚಿಕ್ಕೋಡಿಯಲ್ಲಿ ಅಲ್ಲಮಪ್ರಭು ಕೈಗಾರಿಕಾ ಕೇಂದ್ರವನ್ನು ಸ್ಥಾಪಿಸಿದ್ದಾರೆ. ಚಿಂಚಣಿ ಗ್ರಾಮದ ಸರಕಾರಿ ಪ್ರೌಢಶಾಲೆಗೆ ಶ್ರೀ ಮಠದ ಭೂಮಿಯನ್ನು ದಾನ ನೀಡಿದ್ದಾರೆ. ಕೈಗಾರಿಕಾ ಕೇಂದ್ರದಲ್ಲಿ ಕನ್ನಡದಲ್ಲಿಯೇ ತರಬೇತಿ ನೀಡುತ್ತಿರುವುದು ವಿಶೇಷವೆನಿಸಿದೆ.

### ವಿಶಿಷ್ಟ ಹವ್ಯಾಸಗಳು:

**೧. ಮಾಹಿತಿ ಮತ್ತು ನಾಣ್ಯ ಸಂಗ್ರಹ:** ಅಲ್ಲಮಪ್ರಭು ಸ್ವಾಮಿಗಳು ಹಲವಾರು ಹವ್ಯಾಸ, ಆಸಕ್ತಿ ಮತ್ತು ಕಾಳಜಿಗಳನ್ನು ಹೊಂದಿದ್ದಾರೆ. ನಮ್ಮ ಇತಿಹಾಸಕ್ಕೆ ನಿಖರವಾದ

ದಾಖಲೆಯನ್ನು ಒದಗಿಸುವ ಅಪರೂಪದ ದಾಖಲೆಗಳನ್ನು, ನಾಣ್ಯಗಳನ್ನು ಹಾಗೂ ಲಕೋಟೆಗಳನ್ನು ಸಂಗ್ರಹಿಸುವ ವಿಶಿಷ್ಟವಾದ ಹವ್ಯಾಸವನ್ನು ಹೊಂದಿದ್ದಾರೆ. ಅಲ್ಲಮಪ್ರಭು ಸ್ವಾಮಿಗಳಿಗೆ 'ಕನ್ನಡವೇ ಸತ್ಯ, ಕನ್ನಡವೇ ನಿತ್ಯ'. ಈ ಭಾಗವೆಲ್ಲವೂ ಕನ್ನಡಪ್ರದೇಶ ಎಂದು ಸಿದ್ಧಪಡಿಸುವ ಹಲವು ಮಹತ್ವಪೂರ್ಣವಾದ ದಾಖಲೆಗಳನ್ನು ಸಂಗ್ರಹಿಸಿದ್ದಾರೆ. ಅವುಗಳೆಂದರೆ;

೧. ೧೯೨೨ ರಲ್ಲಿ ಕನ್ನಡ ಭಾಷೆಯಲ್ಲಿ ಮುದ್ರಿತವಾದ ಮನಿ ಆರ್ಡರ ಫಾರ್ಮ್

೨. ೧೯೮೪ ರಲ್ಲಿ ಕನ್ನಡ ಭಾಷೆಯಲ್ಲಿ ನೀಡಿದ ರೇಡಿಯೋ ಲೈಸನ್ಸ್

೩. ೧೯೦೪ ರಲ್ಲಿ ಕನ್ನಡ ಭಾಷೆಯಲ್ಲಿದ್ದ ಕೋರ್ಟ ನೋಟಿಸ್

೪. ಕನ್ನಡ ಉತಾರದ ನಮೂನೆಗಳು

೫. ಸಂಕೇಶ್ವರದ ಪಟ್ಟಣಶೆಟ್ಟಿಯವರ ಅಂಗಡಿಯಲ್ಲಿ ಬರೆದ ಕನ್ನಡ ಅಂಕಿಗಳ ಲೆಕ್ಕಪತ್ರ ಪ್ರತಿ

ಇಂತಹ ಕನ್ನಡದ ಅಪರೂಪದ ದಾಖಲೆಗಳನ್ನು ಸಂಗ್ರಹಿಸಿದ್ದಾರೆ.

ಕನ್ನಡವನ್ನು ಆಳಿದ ಬೇರೆ ಬೇರೆ ಅರಸರ ಕಾಲದಲ್ಲಿ ಚಲಾವಣೆಯಲ್ಲಿದ್ದ ನಾಣ್ಯಗಳು, ಪದಕಗಳು, ದೇಶ-ವಿದೇಶಗಳ ಅಪರೂಪದ ನಾಣ್ಯಗಳು ಮತ್ತು ವಿಶಿಷ್ಟವಾದ ನೋಟುಗಳನ್ನು ಶ್ರೀಗಳು ಅಪಾರ ಪ್ರಮಾಣದಲ್ಲಿ ಸಂಗ್ರಹಿಸಿದ್ದಾರೆ. ಚಿನ್ನ, ಬೆಳ್ಳಿ ಹಾಗೂ ಕಂಚಿನ ಬಹುಮೌಲ್ಯಯುತವಾದ ನಾಣ್ಯಗಳು ಮಠದ ಸಂಗ್ರಹದಲ್ಲಿವೆ.

ಕನ್ನಡ ಸಾಹಿತ್ಯ ಪರಿಷತ್ತು ಹೊರತಂದಿರುವ ವಿಶಿಷ್ಟ ಲಕೋಟೆಗಳು, ಹಿಂದಿನ ಕಾಲದ ಅಂಚೆ ಚೀಟಿಗಳು ಹಾಗೂ ಕೋರ್ಟ ಸ್ಟಾಂಪುಗಳು ಶ್ರೀಗಳ ಸಂಗ್ರಹದಲ್ಲಿ ಸೇರಿಕೊಂಡಿವೆ. ಸ್ವಾಮೀಜಿಯವರು ಐತಿಹಾಸಿಕ ದೃಷ್ಟಿಯಿಂದ ಎಲ್ಲ ಸಾಮಗ್ರಿಗಳನ್ನು ಜೋಪಾನವಾಗಿ ಸಂಗ್ರಹಿಸಿ ಇಡುತ್ತಿದ್ದಾರೆ. ಇದು ಶ್ರೀಗಳ ಒಂದು ಹವ್ಯಾಸವಾಗಿದೆ. ಕರ್ನಾಟಕದ ಪ್ರಾಚೀನತೆ, ಐತಿಹಾಸಿಕತೆ ಮತ್ತು ಸಂಸ್ಕೃತಿಗೆ ಸಂಬಂಧಿಸಿದ ದೃಷ್ಟಿಕೋನದಿಂದ ಇವುಗಳಿಗೆ ಬಹು ಮಹತ್ವವಿದೆ. ಇವುಗಳಿಗೆ ಪ್ರಾಚೀನತೆಯಿಂದಲೂ ಬೆಲೆ ಇದೆ. ಮುಖಬೆಲೆಯಿಂದಲೂ ಬೆಲೆ ಇದೆ. ಸಾಂಸ್ಕೃತಿಕವಾಗಿಯೂ ವಿಶೇಷ ಬೆಲೆ ಇದೆ. ಮಠದ ಸ್ವಾಮಿಗಳು ಇಂತಹ ದಾಖಲೆಗಳನ್ನು ಸಂಗ್ರಹಿಸಿರುವುದು ಕರ್ನಾಟದಲ್ಲಿಯೇ ಅಪರೂಪವಾಗಿದೆ.

**೨. ಪುಸ್ತಕ ಸಂಗ್ರಹ :** ಪುಸ್ತಕಗಳ ಬಗೆಗೆ ಅಪಾರ ಪ್ರೀತಿಯನ್ನು ಹೊಂದಿದ ಸ್ವಾಮಿಗಳು ಶ್ರೀಮಠದಲ್ಲಿ ೧೯೯೭ ರಂದು 'ಆದಿಕವಿ ಪಂಪ ಗ್ರಂಥಾಲಯ'ವನ್ನು ಸ್ಥಾಪಿಸಿದ್ದಾರೆ. ಲಿಂಗಾಯತ ಮಠವಾದರೂ ಒಬ್ಬ ಜೈನ ಕವಿಯ ಹೆಸರನ್ನು ಈ ಗ್ರಂಥಾಲಯಕ್ಕೆ ಇಟ್ಟಿದ್ದು ಸ್ವಾಮೀಜಿಯವರ ಜ್ಯಾತ್ಯತೀತ ಭಾವನೆಗೆ ಹಿಡಿದ ಒಂದು ಸಾಕ್ಷಿಯಾಗಿದೆ. ಈ ಗ್ರಂಥಾಲಯದಲ್ಲಿ ಸುಮಾರು ಸಾವಿರಾರು ಗ್ರಂಥಗಳಿವೆ. ಇಲ್ಲಿಯ ಎಲ್ಲ ಗ್ರಂಥಗಳನ್ನು 'ಗ್ರಂಥಭಿಕ್ಷೆ'ಯ ಮೂಲಕ ಸಂಗ್ರಹಿಸಿದ್ದಾರೆ. ಗಡಿನಾಡಿನಲ್ಲಿ ಹಲವಾರು ಜನರ ಮನೆಯಲ್ಲಿದ್ದ ಪುಸ್ತಕಗಳನ್ನು, ವಹಿಗಳನ್ನು ಮತ್ತು ಹಸ್ತಪ್ರತಿಗಳನ್ನು ಮನವೊಲಿಸಿ

ತಂದು ಸಂಗ್ರಹಿಸಿದ್ದಾರೆ. ಇಂದು ಗ್ರಂಥಾಲಯದಲ್ಲಿ ಗ್ರಂಥಗಳು, ಲೆಕ್ಕ ಪತ್ರದ ವಹಿಗಳು, ಹಸ್ತ ಪ್ರತಿಗಳು ಹಾಗೂ ಮಹತ್ವ ಪೂರ್ಣವಾದ ದಾಖಲೆಗಳು ಸೇರಿಕೊಂಡಿವೆ. ನಾಡಿನ ಕವಿ-ವಿದ್ವಾಂಸರುಗಳು ನೀಡಿದ ಗೌರವ ಪ್ರತಿಗಳೂ ಸಹ ಈ ಗ್ರಂಥಾಲಯಕ್ಕೆ ಸೇರಿಕೊಳ್ಳುತ್ತವೆ.

೩. **ಸಸ್ಯ ಸಂಗ್ರಹ:** ಶ್ರೀಗಳಿಗೆ ಔಷದಿ ಸಸ್ಯ, ಸುವಾಸನೆ ಸಸ್ಯ ಮತ್ತು ಸೌಂದರ್ಯ ಸಸ್ಯಗಳನ್ನು ಸಂಗ್ರಹಿಸುವ ಹವ್ಯಾಸವೂ ಉಂಟು. ಮಠದ ಆವರಣದಲ್ಲಿ ವಿವಿಧ ನಮೂನೆಗಳ ಸಸ್ಯಗಳ ರಾಶಿ ತುಂಬಿ ನೋಡುಗರ ಕಣ್ಮನವನ್ನು ಬೆರಗುಗೊಳಿಸುತ್ತವೆ. ಆಯುರ್ವೇದಿಕ ಔಷಧಿ ಸಸ್ಯಗಳು, ಬೋನ್ಸಾಯಿ ಗಿಡಗಳು, ಸುವಾಸನೆಯ ಸಸ್ಯಗಳು, ಅಲಂಕಾರಿಕ ಸಸ್ಯಗಳು ಮಠದ ಸಸ್ಯರಾಶಿಯಲ್ಲಿ ತುಂಬಿಕೊಂಡಿವೆ. ಶ್ರೀಗಳು ಸಭೆ-ಸಮಾರಂಭಗಳಿಗೆ ಹೋದಾಗ ಸಸ್ಯಗಳನ್ನೇ ಕಾಣಿಕೆಯಾಗಿ ಕೊಡುವಂತೆ ಹೇಳುತ್ತಾರೆ. ಈ ರೀತಿ ಸಸ್ಯಲೋಕವನ್ನು ಮಠದ ಆವರಣದಲ್ಲಿ ನಿರ್ಮಿಸುತ್ತಿದ್ದಾರೆ.

೪. **ಸಾಹಿತಿ ವಿದ್ವಾಂಸರ ಹಸ್ತಾಕ್ಷರ ಸಂಗ್ರಹ:** ಅಲ್ಲಮಪ್ರಭು ಸ್ವಾಮಿಗಳು ಜನ ಸಾಮಾನ್ಯರಿಂದ ಮೊದಲುಗೊಂಡು ಹಿರಿಯ ವಿದ್ವಾಂಸರುಗಳವರೆಗೆ ಎಲ್ಲರ ಜೊತೆಗೆ ಸಂಪರ್ಕವಿಟ್ಟುಕೊಂಡಿದ್ದಾರೆ. ಸಾಹಿತಿ ವಿದ್ವಾಂಸರೊಂದಿಗೆ ನಿರಂತರವಾಗಿ ಪತ್ರವ್ಯವಹಾರವನ್ನು ಮಾಡುತ್ತಾರೆ. ಇಂದಿನ ಮೋಬೈಲಯುಗದಲ್ಲಿ ಪತ್ರ ಬರೆಯುವುದನ್ನೇ ಮರೆತುಹೋಗುತ್ತಿರುವಾಗ ಶ್ರೀಗಳು ಪತ್ರಮಾಧ್ಯಮವನ್ನು ಜೀವಂತಗೊಳಿಸಿದ್ದಾರೆ. ಸ್ವಾಮಿಗಳು ೨೦೦೦ ಪತ್ರಗಳನ್ನು ವ್ಯವಸ್ಥಿತವಾಗಿ ಸಂಗ್ರಹಿಸಿಟ್ಟಿದ್ದಾರೆ. ಶಾಂತರಸ, ದು.ನಿಂ. ಬೆಳಗಲಿ, ಹಾ.ಮಾ. ನಾಯಕ, ಚೆನ್ನವೀರ ಕಣವಿ, ಎಂ.ಎಂ.ಕಲಬುರ್ಗಿ, ಎಂ.ಚಿದಾನಂದಮೂರ್ತಿ, ಸಿದ್ಧಲಿಂಗ ಪಟ್ಟಣಶೆಟ್ಟಿ, ಪಾಪು, ಚಂಪಾ, ಎಸ್.ವಿದ್ಯಾಶಂಕರ, ಕುಂ.ವೀರಭದ್ರಪ್ಪಾ, ಬಿ.ಎ.ಸನದಿ, ಅನಂತಮೂರ್ತಿ, ಸದನಾಂದ ಕನವಳ್ಳಿ, ಗುರುಪಾದ ಮರಿಗುದ್ದಿ, ವೀರೇಶ ಬಡಿಗೇರ, ಮು.ಮಂ.ಚಂದ್ರು, ಸಾ.ಶಿ.ಮರುಳಯ್ಯಾ, ಜಯಂತ ಕಾಯ್ಕಿಣಿ, ಗುರುಲಿಂಗ ಕಾಪಸೆ ಮುಂತಾದ ಹಿರಿಕಿರಿಯ ಸಾಹಿತಿ ವಿದ್ವಾಂಸರುಗಳ ಪತ್ರಗಳನ್ನು ಬಹಳ ಅಚ್ಚುಕಟ್ಟಾಗಿ ಸಂಗ್ರಹಿಸಿದ್ದಾರೆ. ಈ ಎಲ್ಲ ಪತ್ರಗಳನ್ನು ಕುರಿತು ಒಂದು ಕೃತಿ ಬರೆಯುವಷ್ಟು ಸಾಮಗ್ರಿ ಸಂಗ್ರಹದಲ್ಲಿದೆ. ಇದರ ಜೊತೆಗೆ ಬೇರೆ-ಬೇರೆ ಸಾಹಿತಿ ವಿದ್ವಾಂಸರುಗಳಿಗೆ, ಸ್ವಾಮಿಗಳಿಗೆ, ರಾಜಕಾರಣಿಗಳಿಗೆ ತಾವು ಬರೆದ ಪತ್ರಗಳ ನಕಲು ಪ್ರತಿಗಳನ್ನು ಸಹ ಡೈರಿಯಲ್ಲಿ ವ್ಯವಸ್ಥಿತವಾಗಿ ಸಂಗ್ರಹಿಸಿ ದಾಖಲಿಸಿದ್ದಾರೆ. ಈ ಎಲ್ಲ ಸಂಗ್ರಹಗಳನ್ನು ವ್ಯವಸ್ಥಿತವಾಗಿ ಪ್ರದರ್ಶಿಸುವ ಇಚ್ಚೆಯನ್ನು ಸ್ವಾಮಿಗಳು ಹೊಂದಿದ್ದಾರೆ. ಆದಕ್ಕಾಗಿ ಒಂದು ಪ್ರತ್ಯೇಕ ಸಂಗ್ರಹಾಲಯವನ್ನು ಮುಂಬರುವ ದಿನಗಳಲ್ಲಿ ನಿರ್ಮಿಸುವ ಬಯಕೆ ಸ್ವಾಮಿಗಳಲ್ಲಿದೆ.

೫. **ಕಲಾಕೃತಿಗಳ ತಯಾರಿಕೆ :** ಅಲ್ಲಮಪ್ರಭು ಸ್ವಾಮಿಗಳ ಆಸಕ್ತಿಯ ಕ್ಷೇತ್ರಗಳು ಹಲವಾರು. ದಾಖಲೆಗಳ ಸಂಗ್ರಹ, ನಾಣ್ಯಸಂಗ್ರಹ, ಸಸ್ಯಸಂಗ್ರಹ ಮುಂತಾದವುಗಳು.

ಇವುಗಳೊಂದಿಗೆ ಕಸದಿಂದ ರಸವನ್ನು ತೆಗೆಯುವ ಕಲಾವಂತಿಕೆಯನ್ನು ಸ್ವಾಮಿಗಳಲ್ಲಿ ಕಾಣುತ್ತೇವೆ. ಶ್ರೀಮಠಕ್ಕೆ ಭೇಟ್ಟಿಕೊಟ್ಟಾಗ ಅಲ್ಲಿಯ ಕಲಾಕೃತಿಗನ್ನು ನೋಡಿ ಆಶ್ಚರ್ಯವಾಗುತ್ತದೆ. ಮರದ ಬೊಡ್ಡೆಯಿಂದ ಟಿಫಾಯಿಯನ್ನು ತಯಾರಿಸಿದ್ದಾರೆ. ಬೇರಿನ ಮೂಲಕ ನೈಜದಂತೆ ತೋರುವ ಸರ್ಪವನ್ನು ನಿರ್ಮಿಸಿದ್ದಾರೆ. ಬಿದಿರಿನ ಕಡ್ಡಿಗಳಿಂದ ಆಕರ್ಷಕ ಕುಂಡಗಳನ್ನು, ವಿಭಿನ್ನ ಕಲಾಕೃತಿಗಳನ್ನು ತಯಾರಿಸಿದ್ದಾರೆ. ಶೇಂಗಡಿ ಕಾಯಿಯಲ್ಲಿ ಸೂಕ್ಷ್ಮ ಚಿತ್ತಾರವನ್ನು ಅರಳಿಸಿ ತಮ್ಮ ಕಲಾ ಪ್ರೌಢಿಮೆಯನ್ನು ತೋರಿಸಿದ್ದಾರೆ. ಅಡಿಕೆಯ ಬೊಡ್ಡೆಯಿಂದ ವಿಶ್ವೇಶ್ವರಯ್ಯ ಮತ್ತು ಐನಸ್ಟೈನ್‌ರ ಮೂರ್ತಿಗಳನ್ನು ರೂಪಿಸಿದ್ದಾರೆ. ಸ್ವಾಮೀಜಿಯವರು ನಿರ್ಮಿಸಿದ ನೂರಾರು ಕರಕುಶಲ ಕಲಾಕೃತಿಗಳ ದೊಡ್ಡ ಸಂಗ್ರಹವೇ ಶ್ರೀಮಠದಲ್ಲಿದೆ. ಕಾಗದದ ತುಂಡುಗಳಿಂದಲೂ ಕಲಾ ರೂಪಗಳನ್ನು ಅರಳಿಸುವ ಸ್ವಾಮಿಗಳ ಕಲಾ ಉಪಾಸನೆ ಅತ್ಯಂತ ಗಮನಾರ್ಹವಾದದ್ದು.

ಈ ರೀತಿಯಾಗಿ ಅಲ್ಲಮಪ್ರಭು ಸ್ವಾಮಿಗಳು ಹಲವಾರು ವಿಧಾಯಕವಾದ ಕನ್ನಡಪರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಮೂಲಕ ಗಡಿಯಲ್ಲಿ ನುಡಿಜಾಗೃತಿಯನ್ನು ಮೌನವಾಗಿ ನಡೆಸುತ್ತಿದ್ದಾರೆ. ಚಿಂಚಣಿ ಗ್ರಾಮದಲ್ಲಿ ಆಚರಿಸುತ್ತ ಬಂದಿರುವ ರಾಜ್ಯೋತ್ಸವಗಳು ರಾಜಧಾನಿಯಲ್ಲಿರುವ ಜನರಿಗೂ ಬೆರಗು ಮೂಡಿಸುತ್ತವೆ. ಪ್ರತಿವರ್ಷ ನವ್ಹೆಂಬರ ೦೨ ಅಂದರೆ ಚಿಂಚಣಿ ಗ್ರಾಮ ಹಾಗೂ ಸುತ್ತಮುತ್ತಲಿನ ಗಡಿಗ್ರಾಮಗಳಿಗೆ ಅದು ಕನ್ನಡ ಹಬ್ಬವೇ ಸರಿ. ಇಡಿ ಊರು ಕನ್ನಡ ಧ್ವಜಗಳಿಂದ ಕಂಗೊಳ್ಳಿಸುತ್ತದೆ. ಗಡಿಬಳಗದ ಮೂಲಕ ಕೈಕೊಳ್ಳುವ ಹೋರಾಟಗಳು ಗಡಿಭಾಗದ ಕನ್ನಡಿಗರನ್ನು ಒಗ್ಗೂಡಿಸುವಲ್ಲಿ ಸಹಾಯಕಾರಿಯಾಗಿವೆ. ನೆಲ–ಜಲ ಕುರಿತು ಮಾಡಿದ ಜಾಗೃತಿ ಜಾಥಾಗಳು ಗಡಿಜನತೆಯಲ್ಲಿ ಕನ್ನಡ ಪ್ರಜ್ಞೆಯನ್ನು ಮೂಡಿಸುವಲ್ಲಿ ಫಲಕಾರಿಯಾಗಿವೆ. ಅಲ್ಲಮಪ್ರಬು ಜನಕಲ್ಯಾಣ ಸಂಸ್ಥೆಯ ಕನ್ನಡಜಾಗೃತಿ ಪುಸ್ತಕಮಾಲೆಯ ಕೃತಿಗಳು ಕನ್ನಡದ ಹಿರಿಮೆ ಗರಿಮೆಗಳನ್ನು ಸಾರುವ ಕೃತಿಗಳಾಗಿವೆ. ಸುಮಾರು ೨೩ ಕೃತಿಗಳನ್ನು ಪ್ರಕಾಶಿಸಿರುವುದು ಗಡಿಗನ್ನಡದ ಇತಿಹಾಸದಲ್ಲಿ ಒಂದು ಉಜ್ವಲ ದಾಖಲೆಯಾಗಿದೆ. ಮರಾಠಿಮಯವಾದ ವಾತಾವರಣದಲ್ಲಿದ್ದುಕೊಂಡು ಈ ರೀತಿಯಾದ ಕನ್ನಡ ಕಾರ್ಯಗಳನ್ನು ಮಾಡುವುದು ಬಹಳ ದುಸ್ತರವಾದುದು.

ಇಂತಹ ಪ್ರತಿಕೂಲ ವಾತಾವರಣದಲ್ಲಿ ಗ್ರಂಥ ಪ್ರಕಟನೆಮೂಲಕ "ಗಡಿನಾಡ ಗಡಿಗೆಯಲ್ಲಿ ಕನ್ನಡದ ಅಡುಗೆಮಾಡಿ ಪ್ರೀತಿಯಿಂದ ಉಣಬಡಿಸುತ್ತಿರುವ ಚಿಂಚಣಿಯ ಶ್ರೀ ಅಲ್ಲಮಪ್ರಭು ಸ್ವಾಮಿಗಳು"[೩೯] ಕನ್ನಡ ಶಕ್ತಿಯಾಗಿದ್ದಾರೆ. ಪ್ರಾಚೀನ ಮತ್ತು ಆಧುನಿಕ ಕಾಲದ ದೇಶ ವಿದೇಶಗಳ ವಿಶೇಷವಾದ ನಾಣ್ಯ ಹಾಗೂ ನೋಟುಗಳ ಸಂಗ್ರಹದಲ್ಲಿ ಶ್ರೀಗಳದು ಎತ್ತಿದ ಕೈ. ಲಕ್ಷಾಂತರ ರೂಪಾಯಿ ಬೆಲೆಬಾಳುವ ನಾಣ್ಯಗಳ ರಾಶಿ ಸ್ವಾಮಿಗಳ ಸಂಗ್ರಹದಲ್ಲಿದೆ. ಒಂದು ದೇಶದ ಸಂಸ್ಕೃತಿಯನ್ನು ತಿಳಿಸುವ ಈ ನಾಣ್ಯಗಳು

ಅಪರೂಪದ ದಾಖಲೆಗಳಾಗಿವೆ. ಚಿಕ್ಕೋಡಿ ಭಾಗದಲ್ಲಿ ಹಿಂದೆ ಕನ್ನಡ ಭಾಷೆ ಅಧೀಕೃತವಾಗಿತ್ತು ಎಂಬುದಕ್ಕೆ ಕೂಡಿಸಿದ ಸರಕಾರದ ಪತ್ರಗಳು, ಸ್ಟಾಂಪುಗಳು, ವಿವಿಧ ಕಛೇರಿಯ ಪ್ರಮಾಣಪತ್ರಗಳು ವಿಶಿಷ್ಟವಾಗಿವೆ. ಕನ್ನಡದ ಅಧೀಕೃತತನಕ್ಕೆ ಈ ಪ್ರದೇಶದ ಇತಿಹಾಸಕ್ಕೆ ಪುರಾವೆಗಳನ್ನು ಒದಗಿಸುತ್ತವೆ. ಸಾಹಿತಿ ವಿದ್ವಾಂಸರ ಹಸ್ತಾಕ್ಷರಗಳು ಶ್ರೀಮಠದಲ್ಲಿರುವಷ್ಟು ಬೇರೆ ಯಾವುದೇ ಸಂಗ್ರಹಾಲಯದಲ್ಲಿರಲಾರವು. ಅಷ್ಟು ಕವಿ, ಸಾಹಿತಿ-ವಿದ್ವಾಂಸರುಗಳ ಮತ್ತು ಪೂಜ್ಯರ ಹಸ್ತಾಕ್ಷರ ಸಂಪತ್ತು ಮಠದಲ್ಲಿ ತುಂಬಿಕೊಂಡಿದೆ. ಸ್ವಾಮಿಗಳ ಕೈಯಿಂದ ರೂಪ ಪಡೆದುಕೊಂಡ ಕಲಾಕೃತಿಗಳು ಮಠದ ಸ್ವಾಮಿಗಳ ಕಲಾಪ್ರೀತಿಗೆ ಸಾಕ್ಷಿಗಳಾಗಿವೆ. ಆದಿಕವಿ ಪಂಪ ಗ್ರಂಥಾಲಯವು ಸ್ವಾಮಿಗಳ ಪುಸ್ತಕ ಪ್ರೀತಿಯ ದ್ಯೋತಕವಾಗಿದೆ. ಈ ಗ್ರಂಥಾಲಯವು ಸಾರ್ವಜನಿಕರಿಗೆ ಓದಲು ತೆರೆದಿರುತ್ತದೆ. ಅಲ್ಲಮಪ್ರಭು ಸ್ವಾಮಿಗಳು ಕಟ್ಟಿಕೊಂಡಿರುವ ಸಂಘಟನೆಗಳು, ಸಂಸ್ಥೆಗಳು ಗಡಿಭಾಗದಲ್ಲಿ ಕನ್ನಡದ ಕಾಯಕವನ್ನು ಬಸವಣ್ಣನ ಕಾಯಕವೆಂದು ಅವಿರತವಾಗಿ ಮಾಡುತ್ತಿವೆ. ಸಾಹಿತಿ ವಿದ್ವಾಂಸರುಗಳೊಂದಿಗೆ ಹೊಂದಿದ ಒಡನಾಟ ಸ್ವಾಮಿಗಳ ಸ್ನೇಹಶೀಲ ಗುಣವನ್ನು ಬಿಂಬಿಸುತ್ತದೆ. ಬಾಳಿನಬುತ್ತಿ ಕಲಿಕಾಕೇಂದ್ರ ಮಕ್ಕಳ ಬಗ್ಗೆ ಹೊಂದಿರುವ ಕಾಳಜಿಯನ್ನು ತೋರಿಸುತ್ತದೆ. ಹೀಗೆ ವಿಭಿನ್ನ ರೀತಿಯಲ್ಲಿ ಅಲ್ಲಮಪ್ರಭು ಸ್ವಾಮಿಗಳು ಗಡಿಯಲ್ಲಿ ಕನ್ನುಡಿಯ ಸೇವೆ ಗೈಯುತ್ತಿದ್ದಾರೆ.

ಗೋವಾದಲ್ಲಿಯ ನಿರಾಶ್ರಿತ ಕನ್ನಡಿಗರನ್ನು ಭೆಟ್ಟಿಯಾಗಿ ೧೦ ಕ್ವಿಂಟಲ್ ಅಕ್ಕಿಯನ್ನು ನೀಡಿ ಸಾಂತ್ವನ ಹೇಳಿದ್ದಾರೆ. ೧೯೯೮ ರಿಂದ ಮೂರು ವರ್ಷಗಳ ಅವಧಿಯಲ್ಲಿ ಚಿಕ್ಕೋಡಿ ತಾಲೂಕಾ ಕ.ಸಾ.ಪ. ಘಟಕದ ಗೌರವಾಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ೨೦೦೮ರಲ್ಲಿ ನಡೆದ ಕ.ಸಾ.ಪ ಚುನಾವಣೆಯ ಮತದಾರ ಯಾದಿಯಲ್ಲಿ ಚಿಕ್ಕೋಡಿ ತಾಲೂಕಿನ ೧೬೧ ಮತದಾರರಲ್ಲಿ ೩೧ ಜನ ಮತದಾರರು ಚಿಂಚಣಿಯವರೇ ಇದ್ದಾರೆ. ಇದು ಶ್ರೀಗಳು ಗ್ರಾಮೀಣ ಭಾಗದ ಜನರಲ್ಲಿ ಭಾಷೆ ಮತ್ತು ಸಾಹಿತ್ಯದ ಬಗೆಗೆ ಮೂಡಿಸುತ್ತಿರುವ ಜಾಗೃತಿಯೇ ಆಗಿದೆ. ಶ್ರೀಗಳು ಮಾಡುತ್ತಿರುವ ಇಂತಹ ಕನ್ನಡ ಕಾರ್ಯಗಳನ್ನು ಸಾಹಿತ್ಯ ಪರಿಷತ್ತು ಗಮನಿಸಿದೆ. ಆದ್ದರಿಂದ ಬೀದರಿನಲ್ಲಿ ನಡೆದ ೭೨ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳದಲ್ಲಿ ಅಲ್ಲಮಪ್ರಭು ಸ್ವಾಮಿಗಳನ್ನು ಗೌರವಿಸಿದೆ. ಒಟ್ಟಿನಲ್ಲಿ ಚಿಂಚಣಿ ಶ್ರೀಗಳು ಗಡಿಕಾಯುವ ಬೇಲಿಯಾಗಿದ್ದಾರೆ; ಕನ್ನಡದ ಬೆಳೆಯಾಗಿದ್ದಾರೆ.



**ಅಡಿ ಟಿಪ್ಪಣಿಗಳು:**

೧. ಸುಕುಮಾರ ತ್ರೈಮಾಸಿಕ-೨೦೦೩ (ವೀರಶೈವ ಮಠಗಳ ಸಾಹಿತ್ಯಿಕ ಸೇವೆ) ಈಶ್ವರ ಕಾಪಸೆ.

೨. ಕರ್ನಾಟಕ ಮಠಗಳು ಮತ್ತು ಕನ್ನಡ ಸಾಹಿತ್ಯ – ಕೆ.ರವೀಂದ್ರನಾಥ, ಪು. ೧೧೯.

೩. ಅದೇ ಪು. ೧೪೭

೪. ಡಾ. ಸರಜೂ ಕಾಟಕರ ಅವರ ಪತ್ರ.

೫. ವಿಜಯ ಕರ್ನಾಟಕ, ದಿನಪತ್ರಿಕೆ. ದಿ: ೦೬.೧೨.೨೦೦೩
೬. ಸಂಯುಕ್ತ ಕರ್ನಾಟಕ, ದಿನಪತ್ರಿಕೆ, ದಿ: ೧೦.೧೧.೨೦೦೦
೭. ಪ್ರಜಾ ವಾಣಿ, ದಿನಪತ್ರಿಕೆ, ದಿ: ೦೪.೧೧.೨೦೦೧
೮. ಅದೇ
೯. ಹಸಿರು ಕ್ರಾಂತಿ, ದಿನಪತ್ರಿಕೆ, ದಿ: ೦೫.೧೧.೨೦೦೨
೧೦. ವಿಜಯ ಕರ್ನಾಟಕ, ದಿನಪತ್ರಿಕೆ, ದಿ: ೦೬.೧೧.೨೦೦೩
೧೧. ಪ್ರಜಾ ವಾಣಿ, ದಿನಪತ್ರಿಕೆ, ದಿ: ೦೬.೧೧.೨೦೦೪
೧೨. ಅದೇ
೧೩. ವಿಜಯ ಕರ್ನಾಟಕ ದಿನಪತ್ರಿಕೆ, ದಿ: ೦೪.೧೧.೨೦೦೫
೧೪. ಪ್ರಜಾ ವಾಣಿ ದಿನಪತ್ರಿಕೆ, ದಿ: ೦೭.೧೧.೨೦೦೫
೧೫. ಉದಯ ವಾಣಿ ದಿನಪತ್ರಿಕೆ, ದಿ: ೦೪.೧೧.೨೦೦೬
೧೬. ಅದೇ
೧೭. ಕನ್ನಡ ಪ್ರಭ ದಿನಪತ್ರಿಕೆ, ದಿ: ೦೩.೧೧.೨೦೦೭
೧೮. ಚೆನ್ನವೀರ ಕಣವಿಯವರ ಪತ್ರ
೧೯. ಎನ್.ಬಸವಾರಾಧ್ಯರ ಪತ್ರ
೨೦. ಸಂಯುಕ್ತ ಕರ್ನಾಟಕ ದಿನಪತ್ರಿಕೆ, ದಿ: ೦೧.೦೨.೨೦೦೪
೨೧. ಪ್ರಜಾ ವಾಣಿ ದಿನಪತ್ರಿಕೆ, ದಿ: ೦೫.೧೦.೨೦೦೪
೨೨. ಶ್ರೀಗಳ ಸಂದರ್ಶನದ ವಿಷಯ
೨೩. ಅದೇ
೨೪. ಪ್ರಜಾ ವಾಣಿ ದಿನಪತ್ರಿಕೆ, ದಿ: ೦೫.೧೦.೨೦೦೪
೨೫. ಗಡಿ ನುಡಿ – ಸಂ. ನಿಲಗಂಗಾ, ಪು. ೬೯
೨೬. ಸಂಯುಕ್ತ ಕರ್ನಾಟಕ ದಿನಪತ್ರಿಕೆ, ದಿ: ೧೦.೦೮.೨೦೦೩
೨೭. ಅದೇ ದಿ: ೧೦.೦೪.೨೦೦೭
೨೮. ಕರ್ನಾಟಕ ಟಾಯಿಮ್ಸ್ ದಿನಪತ್ರಿಕೆ, ದಿ: ೧೩.೧೦.೨೦೦೪
೨೯. ವಿಜಯ ಕರ್ನಾಟಕ ದಿನಪತ್ರಿಕೆ, ದಿ: ೦೩.೧೦.೨೦೦೫
೩೦. ಮನವಿ ಪತ್ರ, ದಿ: ೧೮.೧೦.೨೦೦೫
೩೧. ಪ್ರಜಾ ವಾಣಿ ದಿನಪತ್ರಿಕೆ, ದಿ: ೨೧.೧೧.೨೦೦೫
೩೨. ವಿಜಯ ಕರ್ನಾಟಕ ದಿನಪತ್ರಿಕೆ, ದಿ: ೨೯.೦೯.೨೦೦೬
೩೩. ಪ್ರಜಾ ವಾಣಿ ದಿನಪತ್ರಿಕೆ, ದಿ: ೦೪.೧೦.೨೦೦೬
೩೪. ಅದೇ ದಿ: ೨೦.೦೧.೨೦೦೮
೩೫. ವಿಜಯ ಕರ್ನಾಟಕ ದಿನಪತ್ರಿಕೆ, ದಿ: ೦೫.೧೦.೨೦೦೬
೩೬. ಕನ್ನಡ ಮಠ (ಅಪ್ರಕಟಿತ ಲೇಖನ) ಎಂ.ಎಂ. ಕಲಬುರ್ಗಿ
೩೭. ಅದೇ
೩೮. ಚಿಂಚಣಿ ಕನ್ನಡದ ಆಡುಂಬೋಲ (ಅಪ್ರಕಟಿತ ಲೇಖನ) ಬಿ.ಎ. ಸನದಿ
೩೯. ಶುಭ ನುಡಿ (ಅಪ್ರಕಟಿತ ಸಂದೇಶ) ಡಾ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು

## ಭಾವ ಚಿತ್ರಗಳು:



'ಕನ್ನಡ ಸ್ವಾಮೀಜಿ' ಶ್ರೀ ಅಲ್ಲಮಪ್ರಭು ಸ್ವಾಮಿಗಳು, ಚಿಂಚಣಿ.



'ಕನ್ನಡ ಮಠ' ಶ್ರೀ ಅಲ್ಲಮಪ್ರಭು ಸಿದ್ಧಸಂಸ್ಥಾನ ಮಠ, ಚಿಂಚಣಿ.



ತಮ್ಮ ಪ್ರಕಾಶನ ಸಂಸ್ಥೆಯ ಪುಸ್ತಕದ ಬಗೆಗೆ ಚೆನ್ನವೀರ ಕಣವಿಯರೊಂದಿಗೆ ಚರ್ಚಿಸುತ್ತಿರುವ ಶ್ರೀಗಳು.



ಕನ್ನಡ ಹೋರಾಟಗಾರರಾದ ಡಾ. ಪಾಟೀಲ ಪುಟ್ಟಪ್ಪನವರೊಂದಿಗೆ ಸಂಭಾಷಣೆಯಲ್ಲಿ ತೊಡಗಿದ ಶ್ರೀಗಳು.



ಕಾದಂಬರಿಕಾರರಾದ ಎಸ್.ಎಲ್.ಭೈರಪ್ಪ ಅವರಿಗೆ ತಮ್ಮ ಪ್ರಕಾಶನ ಸಂಸ್ಥೆಯ ಕೃತಿಯನ್ನು ಪರಿಚಯಿಸುತ್ತಿರುವ ಶ್ರೀಗಳು.



ಗಡಿಗನ್ನಡಿಗರ ಬಳಗದ ಮೊದಲ ರಾಜ್ಯೋತ್ಸವ ಸಮಾರಂಭದಲ್ಲಿ ಪುಸ್ತಕ ಬಿಡುಗಡೆಗೊಳಿಸುತ್ತಿರುವ ಮೂರುಸಾವಿರಮಠ, ನಿಡಸೋಸಿ, ಚಿಂಚಣಿ ಶ್ರೀಗಳು ಮತ್ತು ಡಾ.ಎಂ.ಚಿದಾನಂದಮೂರ್ತಿ.



ದಿ.೦೨/೧೧/೨೦೦೬ರಂದು ಚಿಂಚಣಿ ಮಠದಲ್ಲಿ ಜರುಗಿದ ರಾಜ್ಯೋತ್ಸವವನ್ನು ಉದ್ಘಾಟಿಸುತ್ತಿರುವ ಮು.ಮಂ.ಚಂದ್ರು, ಚಿಂಚಣಿ ಶ್ರೀಗಳು ಹಾಗೂ ಜಯಂತ ಕಾಯ್ಕಿಣಿ.



ಧಾರವಾಡದಲ್ಲಿ ದಿ.೧೭/೦೧/೨೦೦೪ರಂದು ನಡೆದ ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ಡಾ. ಗಂಗೂಬಾಯಿ ಹಾನಗಲ್ಲ, ಎಸ್.ಎಲ್.ಭೈರಪ್ಪ, ಚೆನ್ನವೀರ ಕಣವಿ ಅವರೊಂದಿಗೆ ಶ್ರೀಗಳು.



ದಿ.೦೨/೦೯/೨೦೦೬ರಂದು ಚಿಕ್ಕೋಡಿಯಲ್ಲಿ ಕನ್ನಡ ನುಡಿ-ಕನ್ನಡ ಗಡಿ ಜಾಥಾವನ್ನು ಉದ್ಘಾಟಿಸುತ್ತಿರುವ ಶ್ರೀಗಳು, ಲೀಲಾದೇವಿ ಪ್ರಸಾದ, ಗೊ.ರು.ಚೆನ್ನಬಸಪ್ಪ, ಮು.ಮಂ.ಚಂದ್ರು, ಚಂಪಾ, ಬಿ.ಟಿ.ಲಲಿತಾನಾಯಕ.



ಸಂಕೇಶ್ವರದಲ್ಲಿ ನಡೆದ ಅಖಿಲ ಭಾರತ ಹಸ್ತಪ್ರತಿ ಸಮ್ಮೇಳನದಲ್ಲಿ ಪುಸ್ತಕ ಬಿಡುಗಡೆಗೊಳಿಸುತ್ತಿರುವ ಶ್ರೀಗಳು. ಡಾ.ಚಂದ್ರಶೇಖರ ಕಂಬಾರ, ಡಾ. ವಿವೇಕ ರೈ, ಡಾ. ಎನ್. ಬಸವಾರಾಧ್ಯ.



ದಿ.೨೯/೧೨/೨೦೦೬ರಂದು ನಿಪ್ಪಾಣಿಯಲ್ಲಿ ನಡೆದ ಗಡಿನಾಡ ಉತ್ಸವದಲ್ಲಿ ನಾಡು-ನುಡಿಯ ಬಗ್ಗೆ ಉಪನ್ಯಾಸ ನೀಡುತ್ತಿರುವ ಚಿಂಚಣಿ ಶ್ರೀಗಳು.



ಮಹಾಜನ ವರದಿಯ ಅನುಷ್ಠಾನ ಕುರಿತು ಕೇಂದ್ರದ ನೀತಿ ಖಂಡಿಸಿ ದಿ.೧೪/೦೯/೨೦೦೬ ರಂದು ಚಿಕ್ಕೋಡಿ ತಹಶೀಲದಾರರಿಗೆ ಮನವಿ ಸಲ್ಲಿಸುತ್ತಿರುವ ಚಿಕ್ಕೋಡಿ ಮತ್ತು ಚಿಂಚಣಿ ಶ್ರೀಗಳು.



ಗಡಿಯ ಬಗ್ಗೆ ಕೇಂದ್ರ ಅನುಸರಿಸಿದ ನೀತಿಯನ್ನು ಖಂಡಿಸಿ ದಿ. ೦೪/೦೯/೨೦೦೬ ರಂದು ಚಿಕ್ಕೋಡಿಯಲ್ಲಿ ನಡೆಸಿದ ಮೆರವಣಿಗೆಯಲ್ಲಿ ಮಹಾಂತೇಶ ಕವಟಗಿಮಠ ಮತ್ತು ಚಿಂಚಣಿ ಶ್ರೀಗಳು.



ದಿ.೨೯/೦೫/೨೦೦೭ ರಂದು ನಿಪ್ಪಾಣಿಯಲ್ಲಿ ವೀರರಾಣಿ ಕಿತ್ತೂರು ಚೆನ್ನಮ್ಮಳ ಪುತ್ಥಳಿ ಅನಾವರಣ ಸಂದರ್ಭದಲ್ಲಿ ಚಿಕ್ಕೋಡಿ, ಆಡಿ ಶ್ರೀಗಳೊಂದಿಗೆ ಚಿಂಚಣಿ ಶ್ರೀಗಳು.



ಖ್ಯಾತ ಸಂಶೋಧಕ ಡಾ. ಎಂ.ಎಂ.ಕಲಬುರ್ಗಿ ಅವರಿಗೆ ತಮ್ಮ ಕಲಾಕೃತಿ ತೋರಿಸುತ್ತಿರುವ ಶ್ರೀಗಳು.



ಪ್ರೊ.ಚಂದ್ರಶೇಖರ ಪಾಟೀಲ ಅವರಿಗೆ ತಮ್ಮ ಸಂಗ್ರಹದ ದಾಖಲೆಗಳನ್ನು ಪರಿಚಯಿಸುತ್ತಿರುವ ಶ್ರೀಗಳು.



ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆಯ 'ಕನ್ನಡ ಜಾಗೃತಿ ಪುಸ್ತಕ ಮಾಲೆ'ಯ ಕೃತಿಗಳು.

ಅಧ್ಯಾಯ ೪

# ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ–ಕನ್ನಡ ಕಾರ್ಯ

ಪ್ರಾಚೀನ ಕಾಲದಿಂದಲೂ ವೀರಶೈವ ಮಠಗಳು ಕನ್ನಡ ಸಾಹಿತ್ಯ, ಕಲೆ, ಸಂಸ್ಕೃತಿಯ ಉಳಿವು ಬೆಳವಣಿಗೆಗೆ ಅಹರ್ನಿಸಿ ದುಡಿಯುತ್ತಿರುವುದು ಇತಿಹಾಸವನ್ನು ಓದಿದಾಗ ಮನದಟ್ಟಾಗುತ್ತದೆ. "ಮಠಗಳು ವೈಭವದ ಕೇಂದ್ರಗಳಲ್ಲ. ಸಮಾಜಸೇವೆಯ ಕೇಂದ್ರಗಳು. ಈ ಕಾರಣಕ್ಕಾಗಿ ಅವುಗಳನ್ನು ಅಡವಿಯಲ್ಲಿ ಆಶ್ರಮಗಳನ್ನಾಗಿ ಉಳಿಸಿರದೆ, ಗ್ರಾಮಗಳಲ್ಲಿ ಮಠಗಳನ್ನಾಗಿ ಬೆಳೆಸಿದರು"[1] ಮಠಗಳ ಮೂಲಕ ಸಮಾಜ ಸುಧಾರಣೆಗೆ ವಿಶಿಷ್ಟವಾದ ಸಂಸ್ಥೆಗಳನ್ನು ಕಟ್ಟಿಕೊಂಡಿವೆ. ಧಾರ್ಮಿಕ ಕಾರ್ಯದೊಂದಿಗೆ ಸಮಾಜ ಸ್ವಾಸ್ಥ್ಯಕ್ಕಾಗಿ ಮಠಗಳು ಪ್ರಯತ್ನಿಸುತ್ತಿವೆ.

ಮಠದೊಳಗೆ ಕುಳಿತು ಕೇವಲ ಪೂಜೆ, ಪುರಾಣ, ಅಡ್ಡಪಲ್ಲಕ್ಕಿ, ಪಾದಪೂಜೆಗೆ ತಮ್ಮನ್ನು ಸೀಮಿತಗೊಳಿಸಿಕೊಳ್ಳದೆ, ನಾಡು–ನುಡಿಯ ಏಳ್ಗೆಗಾಗಿ ದುಡಿದು, ಕನ್ನಡ ಸಾಹಿತ್ಯಕ್ಕೆ ಅತ್ಯಮೂಲ್ಯವಾದ ಕಾಣಿಕೆಯನ್ನು ನೀಡುವುದರಲ್ಲಿ ವೀರಶೈವ ಮಠಗಳು ಮುಂಚೂಣಿಯಲ್ಲಿವೆ.

ಮೂಲತಃ ಮಠಗಳು ಧಾರ್ಮಿಕ ಕೇಂದ್ರಗಳಾಗಿದ್ದು, ವಿದ್ಯಾರ್ಥಿಗಳಿಗೆ ಧಾರ್ಮಿಕ ಶಿಕ್ಷಣವನ್ನು ನೀಡುತ್ತಾ ಧರ್ಮ ಜಾಗೃತಿಯನ್ನು ಮಾಡಿರುವುದು ಸರ್ವವಿಧಿತ. ಕ್ರಮೇಣವಾಗಿ ಧರ್ಮದೊಂದಿಗೆ ನಾಡು–ನುಡಿಯ ಅಭಿವೃದ್ಧಿ ಅಗತ್ಯವೆಂಬ ಅಂಶ ಮನದಟ್ಟಾಗಿ ಎರಡನ್ನು ಏಕಪ್ರಕಾರವಾಗಿ ಅಭಿವೃದ್ಧಿಗೊಳಿಸಿದರು. ಇಲ್ಲಿ ನಾಡನ್ನು ಉಳಿಸುವುದೆಂದರೆ ನಾಡಭಾಷೆಯನ್ನು, ನಾಡಸಂಸ್ಕೃತಿಯನ್ನು ಉಳಿಸುವುದೆಂದೇ ಅರ್ಥ.

ಈ ದಿಶೆಯಲ್ಲಿ ಎಲ್ಲ ಮಠಗಳು ಒಂದೇ ರೀತಿಯಲ್ಲಿ ಕೆಲಸಮಾಡದೇ ಹೋಗಿರಬಹುದು. ಆದರೆ ಕೆಲವು ಮಠಗಳು ಮಾತ್ರ ಗಮನಾರ್ಹ ಸೇವೆ ಸಲ್ಲಿಸಿವೆ. "ಅಡವಿಯಲ್ಲಿಯ ಆಶ್ರಮ ಬೇರೆ, ಊರಲ್ಲಿಯ ಮಠ ಬೇರೆ. ಒಂದು ಗುರಿ ಆತ್ಮಕಲ್ಯಾಣ, ಇನ್ನೊಂದು ಗುರಿ ಆತ್ಮ ಕಲ್ಯಾಣದೊಂದಿಗೆ ಸಮಾಜ ಕಲ್ಯಾಣ. ಹೀಗಾಗಿ ಮಠವೆನ್ನುವುದು ಧರ್ಮದೊಂದಿಗೆ ಸಮಾಜದ ಆರೋಗ್ಯಕ್ಕೆ ಅವಶ್ಯವಿರುವ ಶಿಕ್ಷಣಪ್ರಸಾರ, ಸಾಹಿತ್ಯಸೃಷ್ಟಿ, ನ್ಯಾಯ ಪರಿಪಾಲನೆ, ಔಷದೋಪಚಾರ, ವೃತ್ತಿವ್ಯವಸ್ಥೆ, ಕಲಾಪೋಷಣೆ, ಸಂಸ್ಕೃತಿಯ ಸಂವರ್ಧನೆ ಇತ್ಯಾದಿ ಚಟುವಟಿಕೆಗಳಿಗೆ ಚ್ಯುತಿಬಾರದಂತೆ ನೋಡಿಕೊಳ್ಳುವ ಒಂದು ಸಾಮಾಜಿಕ ಸಂಸ್ಥೆ"[2] ಎಂಬ ವಿದ್ವಾಂಸರ ಮಾತು ಇದಕ್ಕೆ ಪೂರಕವಾಗಿದೆ.

ಇಂಥ ಸಂಸ್ಥೆಗಳಿಂದ ಕನ್ನಡ ನಾಡು-ನುಡಿಪರ ಕಾರ್ಯಗಳು ಅವ್ಯಾಹತವಾಗಿ ಮುಂದುವರೆದುಕೊಂಡು ಬರುತ್ತಿರುವುದು ಆರೋಗ್ಯಕರ ಬೆಳವಣಿಗೆಯಾಗಿದೆ. ಈ ನಿಟ್ಟಿನಲ್ಲಿ ಇಂದು ಹಲವಾರು ಮಠಮಾನ್ಯಗಳು ಧರ್ಮದೊಂದಿಗೆ ಸಾಹಿತ್ಯವನ್ನು ಜನರಿಗೆ ತಲುಪಿಸುವ ಕಾರ್ಯದಲ್ಲಿ ನಿರತವಾಗಿವೆ. ಗದುಗಿನ ತೋಂಟದಾರ್ಯ ಮಠವು ಕನ್ನಡ ನಾಡಿನಲ್ಲಿ ಅಲ್ಲಮಪ್ರಭು ಸಂಪ್ರದಾಯದ ಯಡೆಯೂರು ತೋಂಟದ ಸಿದ್ಧಲಿಂಗಯತಿಗಳ ಪರಂಪರೆಯ ಮಠವಾಗಿದೆ. ಈಗಿರುವ ಪೀಠಾಧಿಪತಿಗಳಾದ ಜ.ಡಾ. ಸಿದ್ಧಲಿಂಗ ಮಹಾಸ್ವಾಮಿಗಳು ಶ್ರೀಮಠದ ೧೯ನೇ ಜಗದ್ಗುರುಗಳು. ಇವರು ಸಾಹಿತ್ಯ ಪ್ರಕಟಣೆಯಲ್ಲಿ ಅಗಾಧವಾದ ಕಾರ್ಯಗೈಯ್ಯುತ್ತಿದ್ದಾರೆ. ಶ್ರೀಮಠವು 'ಲಿಂಗಾಯತ ಅಧ್ಯಯನ ಸಂಸ್ಥೆ'ಯಿಂದ ವಿಭಿನ್ನಮಾಲೆಗಳ ಅಡಿಯಲ್ಲಿ ಹಲವಾರು ಮೌಲ್ಯಯುತ ಕೃತಿಗಳನ್ನು ಪ್ರಕಟಿಸಿದೆ. ಗದಗ ಮಠವು ಇಂದು ಪ್ರಕಟನಾ ಕ್ಷೇತ್ರದಲ್ಲಿ ದಾಖಲೆಯ ಕೆಲಸ ಮಾಡಿದ್ದು ವಿಶ್ವವಿದ್ಯಾಲಯಕ್ಕೆ ಸರಿಸಮವಾಗಿ ಪುಸ್ತಕಗಳನ್ನು ಹೊರತಂದಿದೆ.

ಬೆಳಗಾವಿಯ ನಾಗನೂರು ರುದ್ರಾಕ್ಷಿಮಠವು ಲಿಂ.ಡಾ. ಶಿವಬಸವ ಸ್ವಾಮಿಗಳ ಕಾಲಾವಧಿಯಲ್ಲಿ 'ಲಿಂಗಾಯತ ಅಧ್ಯಯನ ಅಕ್ಯಾಡೆಮಿ'ಯನ್ನು ಸ್ಥಾಪಿಸಿ ತನ್ಮೂಲಕ ಹಲವಾರು ಮೌಲಿಕ ಕೃತಿಗಳನ್ನು ಪ್ರಕಟಿಸಿ ಅಧ್ಯಯನಾಸಕ್ತರ ಗಮನ ಸೆಳೆದಿದೆ. ಕಲಬುರ್ಗಿಯ ಶ್ರೀ ಶರಣಬಸವೇಶ್ವರ ಸಂಸ್ಥಾನವು 'ಶ್ರೀ ಶರಣಬಸವೇಶ್ವರ ಗ್ರಂಥ ವಿಶ್ವವಿದ್ಯಾಲಯ ಪ್ರಕಾಶನ'ದಡಿಯಲ್ಲಿ ಮೌಲ್ಯಯುತ ಸಾಹಿತ್ಯಕೃತಿಗಳನ್ನು ಪ್ರಕಟಿಸಿದೆ. ಹೀಗೆಯೇ ಬಾಲ್ಕಿಯ ಹಿರೇಮಠ ಸಂಸ್ಥಾನ, ಚಿತ್ರದುರ್ಗದ ಬೃಹನ್ಮಠ, ಸಿರಿಗೆರೆ ಬೃಹನ್ಮಠ, ಹುಬ್ಬಳ್ಳಿಯ ಮೂರುಸಾವಿರ ಮಠ, ಮುಂಡರಗಿ, ಕೊಟ್ಟೂರು, ಆನಂದಪೂರ, ಹೊಸಪೇಟ, ಸೊಂಡೂರು ಇನ್ನೂ ಮುಂತಾದ ವೀರಶೈವ ಲಿಂಗಾಯತ ಮಠಗಳು ಸಾಹಿತ್ಯಸೇವೆಯನ್ನು ನಿರಂತರ ಮುಂದುವರೆಸಿಕೊಂಡು ಬರುತ್ತಿವೆ. ಈ ಮಠಗಳು ಪ್ರಕಟಿಸಿರುವ ಪುಸ್ತಕಗಳೆಲ್ಲ ಕೇವಲ ಧಾರ್ಮಿಕ ಕೃತಿಗಳಲ್ಲ ಎಂಬುದನ್ನು ಲಕ್ಷಿಸಬೇಕು.

ಇದೇ ದಾರಿಯಲ್ಲಿಯೇ ಚಿಂಚಣಿಯ ಶ್ರೀ ಅಲ್ಲಮಪ್ರಭು ಸಿದ್ಧಸಂಸ್ಥಾನಮಠ ಗಡಿನಾಡಿನಲ್ಲಿ ಕನ್ನುಡಿ ಕಾಯ್ವಪಣತೊಟ್ಟು 'ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ'ಯನ್ನು ಕಟ್ಟಿಕೊಂಡು ಇದುವರೆಗೆ ಕನ್ನಡ ನಾಡು-ನುಡಿಗೆ ಸಂಬಂಧಿಸಿದಂತೆ 'ಕನ್ನಡಜಾಗೃತಿ ಪುಸ್ತಕಮಾಲೆ'ಯ ಅಡಿಯಲ್ಲಿ ೨೩ ಕೃತಿಗಳನ್ನು ಪ್ರಕಟಿಸಿದೆ. ಈ ಮೂಲಕ ಕನ್ನಡ ನಾಡು-ನುಡಿಪರ ಚಿಂತನೆಯನ್ನು ಬಲಗೊಳಿಸುವ ನಿಟ್ಟಿನಲ್ಲಿ ಕ್ರಿಯಾಶೀಲವಾಗಿದೆ. ಸದ್ಯದ ಪೀಠಾಧಿಪತಿಗಳಾದ ಶ್ರೀ ಅಲ್ಲಮಪ್ರಭು ಸ್ವಾಮಿಗಳು ಕನ್ನಡ-ಕನ್ನಡಿಗ-ಕರ್ನಾಟಕ ಎಂಬುದನ್ನು ಉಸಿರಾಗಿಸಿಕೊಂಡು ತಮ್ಮ ಗುರುಗಳಾದ ಜ.ಡಾ. ತೋಂಟದ

ಸಿದ್ಧಲಿಂಗಸ್ವಾಮಿಗಳ ಆಶಯದಂತೆ ಗಡಿನಾಡಿನಲ್ಲಿ ಕನ್ನಡದ ಜಾಗೃತಿಗಾಗಿಯೇ ಪುಸ್ತಕಮಾಲೆಯೊಂದನ್ನು ನಡೆಸಿಕೊಂಡು ಬರುತ್ತಿದ್ದಾರೆ. ರಾಜ್ಯದ ರಾಜಧಾನಿಯಲ್ಲಾಗಲಿ, ಅನುಕೂಲವಿರುವ ನಡುನಾಡಿನಲ್ಲಾಗಲಿ ಇಂತಹ ಕೆಲಸಕ್ಕೆ ಅನೇಕ ಅನುಕೂಲತೆಗಳು ಇರುತ್ತವೆ. ಗಡಿಭಾಗದಲ್ಲಿ ಈ ಬಗೆಯ ಅನುಕೂಲತೆಗಳಿರುವುದಿಲ್ಲ. ಸುತ್ತಲಿನ ಪರಿಸರ ಇದಕ್ಕೆ ಪೂರಕವಾಗಿರುವುದಿಲ್ಲ. ಇಂಥಲ್ಲಿ ಕೆಲಸ ಮಾಡುವುದು ತುಂಬ ದುಸ್ತರವಾಗಿರುತ್ತದೆ.

ಗಡಿಭಾಗದಲ್ಲಿ ಇಂತಹ ಪ್ರಕಾಶನ ಸಂಸ್ಥೆಯನ್ನು ಹುಟ್ಟುಹಾಕಲು ಮೂಲ ಪ್ರೇರಣೆ ಗದುಗಿನ ಜ.ಡಾ. ತೋಂಟದ ಸಿದ್ಧಲಿಂಗ ಸ್ವಾಮಿಗಳು. ಅವರ ಕನ್ನಡಪರ ಕಳಕಳಿ, ಚಿಂತನೆ, ಪ್ರೇಮ ಅಲ್ಲಮಪ್ರಭು ಸ್ವಾಮಿಗಳಿಗೆ ಶ್ರೀದೀಕ್ಷೆಯಾಗಿದೆ. ಗದುಗಿನ ಗುರುಗಳ ಉಪದೇಶದ ಮೇರೆಗೆ ಗಡಿಯಲ್ಲಿರುವ ಮಠಕ್ಕೆ ಬಂದು ಧರ್ಮದ ಕಾರ್ಯಕ್ಕಿಂತ ಹೆಚ್ಚಾಗಿ ನಾಡಧರ್ಮ, ಕನ್ನಡ ಧರ್ಮದ ಕೈಂಕರ್ಯವನ್ನು ತ್ರಿಕರಣಶುದ್ಧಿಯಿಂದ ಗೈಯ್ಯುತ್ತಿರುವುದು, ಗಡಿಕನ್ನಡಿಗರಿಗೆ ಚೈತನ್ಯ ಮತ್ತು ಉತ್ಸಾಹವನ್ನು ತುಂಬುತ್ತಿರುವುದು ಚಾರಿತ್ರಿಕ ಸಂಗತಿಯಾಗಿದೆ.

ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆಯು ನಾಡಿನ ಖ್ಯಾತ ವಿದ್ವಾಂಸರುಗಳಾದ ಡಾ. ಎಂ. ಚಿದಾನಂದಮೂರ್ತಿ, ಡಾ. ಎಂ.ಎಂ. ಕಲಬುರ್ಗಿ, ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ, ಡಾ. ಎಸ್. ವಿದ್ಯಾಶಂಕರ, ಪ್ರೊ. ಚಂಪಾ ಅವರ ಮಾರ್ಗದರ್ಶನದಲ್ಲಿ ಮುನ್ನಡೆಯುತ್ತಿದೆ. ಡಾ. ಗುರುಪಾದ ಮರಿಗುದ್ದಿ, ಚಂದ್ರಕಾಂತ ಪೋಕಳೆ, ಡಾ. ಪಿ.ಜಿ. ಕೆಂಪಣ್ಣವರ, ಡಾ. ಎಸ್.ವಾಯ್. ಹಂಜಿ, ಡಾ. ದಯಾನಂದ ನೂಲಿ, ಡಾ. ಅನಿಲ ಕಮತೆ, ಡಾ. ಮಲ್ಲಿಕಾರ್ಜುನ ಹೂಗಾರ, ಡಾ. ವ್ಹಿ.ಎಸ್. ಮಾಳಿ, ಪ್ರೊ. ಸುಬ್ರಾವ ಎಂಟೆತ್ತಿನವರ ಅವರುಗಳ ನಿರ್ದೇಶನದಲ್ಲಿ ಈ ಪ್ರಕಾಶನ ಸಂಸ್ಥೆಯು ವರ್ಷದಿಂದ ವರ್ಷಕ್ಕೆ ಸದೃಢಗೊಂಡು ಜನರಲ್ಲಿ ನಾಡು-ನುಡಿಯ ಬಗೆಗೆ ಅರಿವು ಮತ್ತು ಅಭಿಮಾನ ಹುಟ್ಟಿಸುವಂಥ ಕೃತಿಗಳನ್ನು ಪ್ರಕಟಿಸುತ್ತಿದೆ. ಈ ಎಲ್ಲ ಕಾರ್ಯಗಳ ಹಿಂದೆ ಈಗಿನ ಪೀಠಾಧ್ಯಕ್ಷರಾದ ಶ್ರೀ ಅಲ್ಲಮಪ್ರಭುಸ್ವಾಮಿಗಳು ಹೆಚ್ಚಿನ ಆಸಕ್ತಿ ಮತ್ತು ಪ್ರೋತ್ಸಾಹವಿದೆ. ತನ್ಮೂಲಕ ಪ್ರಕಾಶನ ಸಂಸ್ಥೆಯನ್ನು ಈ ಕೆಲಸಕ್ಕೆ ಅಣಿಗೊಳಿಸಿದ್ದಾರೆ. ಅವರ ವಿದ್ಯಾಭ್ಯಾಸದ ಮಟ್ಟ ಹೇಳಿಕೊಳ್ಳುವಂತೆ ಹೆಚ್ಚಿನದೇನೂ ಇಲ್ಲ. ಆದರೆ ಜಾಗೃತಿಮಾಲೆಯ ಕೃತಿಗಳಿಂದ ಕನ್ನಡದ ಶ್ರೀ ಸಾಮಾನ್ಯ ಎಚ್ಚರಗೊಳ್ಳಬೇಕೆಂಬ, ಘನವಾದ ಉದ್ದೇಶದಲ್ಲಿ ಅವರನ್ನು ಎಲ್ಲರೂ ಸರಿಗಟ್ಟಲಾರರು. ಪ್ರಕಾಶನ ಸಂಸ್ಥೆಯ ಎಲ್ಲ ಆಗುಹೋಗುಗಳ ಪ್ರತಿಯೊಂದು ಹಂತದಲ್ಲಿ ಅವರ ಸಲಹೆ ಸೂಚನೆ ಇದ್ದೇ ಇರುತ್ತದೆ. ಇವರ ಬೆನ್ನಹಿಂದಿನ ಶಕ್ತಿಯಾಗಿ ಗದಗಿನ ಜ.ಡಾ. ಸಿದ್ದಲಿಂಗ ಸ್ವಾಮಿಗಳು ಸದಾಕಾಲವೂ ಇರುವುದು ಪ್ರಕಾಶನ ಸಂಸ್ಥೆಗೆ ಉತ್ತೇಜಕವಾಗಿದೆ.

**ಧ್ಯೇಯೋದ್ದೇಶಗಳು:**

೧. ಕನ್ನಡಪರ ಚಿಂತನೆಗಳನ್ನೊಳಗೊಂಡ ಕೃತಿಗಳನ್ನು ಪ್ರಕಟಿಸುವುದು.

೨. ಗಡಿಭಾಗದ ಸಾಹಿತಿ, ಕಲಾವಿದ, ವಿದ್ವಾಂಸರಿಗೆ ಪ್ರೋತ್ಸಾಹ ನೀಡುವುದು.

೩. ಪುಸ್ತಕ ಪ್ರಕಟನೆ ಒಂದು ಕನ್ನಡಸೇವೆ ಎಂದು ಪರಿಗಣಿಸುವುದು.

೪. ಜನರಲ್ಲಿ ಪುಸ್ತಕ ಪ್ರೀತಿಯನ್ನು ಬೆಳೆಸುವುದು.

೫. ಕನ್ನಡ ಸಾಹಿತ್ಯದ ಬಗೆಗೆ ಗಡಿಜನತೆಯಲ್ಲಿ ಅಭಿಮಾನವನ್ನು ಬೆಳೆಸುವುದು.

೬. ಜಾತಿ-ಭೇದ ತೊರೆದು ಕನ್ನಡ ಧರ್ಮ ಸ್ಥಾಪಿಸುವುದು.

೭. ಗಡಿಭಾಗದ ಸಾಹಿತಿಗಳ ಸಮಗ್ರ ಸಾಹಿತ್ಯವನ್ನು ಪ್ರಕಟಿಸುವುದು.

೮. ಕನ್ನಡದ ಸಮಸ್ಯೆಗಳ ಕುರಿತು ವಿಶೇಷ ಕಾಳಜಿ ವಹಿಸುವುದು.

೯. ಗಡಿಯಲ್ಲಿ ಕನ್ನಡದ ಪರಿಸರವನ್ನು ನಿರ್ಮಿಸುವುದು.

೧೦. ಉತ್ತಮ ಸಂಸ್ಕಾರ ಮತ್ತು ಶಿಕ್ಷಣವನ್ನು ನೀಡುವುದು.

೧೧. ಕರ್ನಾಟಕದ ಇತಿಹಾಸ ಮತ್ತು ಪರಂಪರೆಯನ್ನು ಗಡಿಕನ್ನಡಿಗರಿಗೆ ತಿಳಿಸುವುದು.

೧೨. ಸರಕಾರದ ಯೋಜನೆಗಳ ಬಗೆಗೆ ಗಡಿಜನತೆಯಲ್ಲಿ ಅರಿವನ್ನು ಮೂಡಿಸುವುದು.

೧೩. ಮರಾಠಿ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿ ಪ್ರಕಟಿಸುವುದು.

೧೪. ಕನ್ನಡದ ಪ್ರಮುಖ ಕೃತಿಗಳನ್ನು ಮರಾಠಿಗೆ ಅನುವಾದಿಸಿ ಪ್ರಕಟಿಸುವುದು.

೧೫. ಕನ್ನಡಿಗರಲ್ಲಿ ಕನ್ನಡ ಸಂಸ್ಕೃತಿ, ಭಾಷೆ, ಗಡಿಗಳ ಬಗ್ಗೆ ಜಾಗೃತಿ ಮೂಡಿಸುವುದು.

ಈ ಎಲ್ಲ ಧ್ಯೇಯೋದ್ದೇಶಗಳನ್ನೊಳಗೊಂಡ ಅಲ್ಲಮಪ್ರಭು ಜನಕಲ್ಯಾಣಸಂಸ್ಥೆಯು 'ಕನ್ನಡಜಾಗೃತಿ ಪುಸ್ತಕಮಾಲೆ' ಯಲ್ಲಿ ಇದುವರೆಗೆ ಪ್ರಕಾಶನಗೊಳಿಸಿದ ಕೃತಿಗಳ ಪರಿಚಯನ್ನು ಈ ಮುಂದೆ ಸಂಕ್ಷಿಪ್ತವಾಗಿ ಗಮನಿಸಬಹುದು.

**'ಕನ್ನಡಜಾಗೃತಿ ಪುಸ್ತಕಮಾಲೆ'ಯ ಕೃತಿಗಳ ಪರಿಚಯ:**

ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆಯು ಕನ್ನಡಜಾಗೃತಿ ಪುಸ್ತಕಮಾಲೆ ಯೋಜನೆಯಲ್ಲಿ ಇದುವರೆಗೆ ೨೩ ಕೃತಿಗಳನ್ನು ಪ್ರಕಟಿಸಿದೆ. ಈ ಕೃತಿಗಳಲ್ಲಿ ಕನ್ನಡ ನಾಡು-ನುಡಿಯ ಚಿಂತನೆ, ಗಡಿನಾಡಿನ ಸಮಸ್ಯೆಗಳ ಚಿತ್ರಣ, ಕನ್ನಡಪರ ಹೋರಾಟಗಳು, ಸಮಗ್ರ ಕಾವ್ಯ, ಕನ್ನಡ ರಂಗ ಭೂಮಿ, ಕರ್ನಾಟಕ ಏಕೀಕರಣ, ಬೆಳಗಾವಿ ಜಿಲ್ಲೆಯ ಸಾಹಿತ್ಯ ಪರಿಚಯ, ಮಹಾಜನ ವರದಿ ಮುಂತಾದ ವಿಷಯಗಳು ಮೂಡಿಬಂದಿವೆ. ಕನ್ನಡ-ಕನ್ನಡಿಗ-ಕರ್ನಾಟಕ' ಎಂಬ ಆಶೆಯದೊಂದಿಗೆ ಅಲ್ಲಮಪ್ರಭು

ಜನಕಲ್ಯಾಣ ಸಂಸ್ಥೆಯು ಕನ್ನಡಜಾಗೃತಿ ಪುಸ್ತಕಮಾಲೆಯಡಿ ಪುಸ್ತಕ ಪ್ರಕಟಣಾ ಕಾರ್ಯವನ್ನು ಮಾಡುತ್ತಿದೆ. ಆ ಕೃತಿಗಳು ಹೀಗಿವೆ,

೧. ಸೀಮೆ: ಸಂ, ಡಾ. ಅನಿಲ ಕಮತೆ ಮತ್ತು ಚಂದ್ರಕಾಂತ ಪೋಕಳೆ

'ಸೀಮೆ' ಕನ್ನಡ ನಾಡಿನ ಎಲ್ಲ ಗಡಿಗಳ ವಿಭಿನ್ನ ಮಗ್ಗುಲಗಳ ಅಧ್ಯಯನದ ಆಕರ ಗ್ರಂಥವೆಂಬುದರಲ್ಲಿ ಎರಡು ಮಾತ್ತಿಲ್ಲ. ಇದರಲ್ಲಿ ಕನ್ನಡ ನಾಡಿನ ಭಾಷೆ ಸಂಸ್ಕೃತಿಯ ತಿಳುವಳಿಕೆ ನೀಡುವುದರ ಮೂಲಕ ಜನರಿಗೆ ಕನ್ನಡದ ಗಡಿಭಾಗದಲ್ಲಿ ಕನ್ನಡ ಸಂಸ್ಕೃತಿ, ಇತಿಹಾಸಗಳನ್ನು ಕುರಿತು ಎಚ್ಚರಿಕೆಯನ್ನುಂಟು ಮಾಡುವ ಚಿಂತನಾಶೀಲ ಲೇಖನಗಳಿವೆ. ಮೊದಲನೆಯ ಭಾಗದಲ್ಲಿ ಗಡಿಪ್ರದೇಶದ ಅಧ್ಯಯನಕ್ಕೆ ಉಪಯುಕ್ತವಾದ ಮಾಹಿತಿಗಳಿವೆ. ಎರಡನೆಯ ಭಾಗದಲ್ಲಿ ಚಿಕ್ಕೋಡಿ ತಾಲೂಕಿನ ಸುದೀರ್ಘ ಪರಂಪರೆಯನ್ನು ಸಾದರಪಡಿಸುವ ಲೇಖನಗಳು ಇವೆ. ಚಿಕ್ಕೋಡಿ ತಾಲೂಕಿನ ಸಾಹಿತ್ಯಿಕ, ಸಾಂಸ್ಕೃತಿಕ ಒಂದು ಅಧ್ಯಯನದ ಮೊದಲ ಪ್ರಯತ್ನವೇ 'ಸೀಮೆ' ಎಂಬ ಕೃತಿಯಾಗಿದೆ. ಗಡಿಭಾಗದ ಜನರ ಸ್ಥಿತಿ-ಗತಿ, ಕನ್ನಡದ ಅವಸ್ಥೆ, ಕನ್ನಡ ಶಾಲೆಗಳ ವಾಸ್ತವ ಚಿತ್ರಣ, ಶಾಸನಗಳ ಪರಿಚಯ, ಸೀಮೆಗೆ ಶಕ್ತಿಯನ್ನು ಒದಗಿಸಿವೆ.

ನಾಡಿನ ಬೇರೆ-ಬೇರೆ ಭಾಗದ ವಿದ್ವಾಂಸರುಗಳಾದ ಶಿವರಾಮಕಾರಂತ, ಚೆನ್ನವೀರ ಕಣವಿ, ಕೈಯ್ಯಾರ ಕಿಞ್ಞಣ್ಣರೈ, ಮಹಾದೇವ ಬಣಕಾರ, ಚಂದ್ರಕಾಂತ ಪೋಕಳೆ, ಡಾ. ಎಸ್.ಎಲ್. ಭೈರಪ್ಪ, ಮನು ಬಳಿಗಾರ, ಡಾ. ಗುರುಪಾದ ಮರಿಗುದ್ದಿ ಮುಂತಾದವರ ಲೇಖನಗಳಿಂದ ಈ ಕೃತಿಯು ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆಯ ಮೊದಲ ಅಧ್ಯಯನ ಪೂರ್ಣ ಕೃತಿ ಎಂಬುದು ಸಾಬೀತಾಗಿದೆ. ಸೀಮೆಯು ನಿಸ್ಸೀಮವಾದ ವ್ಯಾಪ್ತಿಯನ್ನು ಹೊಂದಿದ ಒಂದು ಆಕರ ಗ್ರಂಥವಾಗಿದೆ. ಈ ಕೃತಿಗೆ ಹುಕ್ಕೇರಿ ಹಿರೇಮಠದ 'ಸಾಧನ ಕಿರಣ' ಪ್ರಶಸ್ತಿಯು ಲಭಿಸಿದೆ.

೨. **ಕನ್ನಡ-ಕನ್ನಡಿಗ-ಕರ್ನಾಟಕ:** ಸಂ. ಎಲ್.ಎಸ್. ಶೇಷಗಿರಿರಾವ, ಗೋ.ರು. ಚನ್ನಬಸಪ್ಪ, ರಾ.ನಂ. ಚಂದ್ರಶೇಖರ

ಈಗಾಗಲೇ ಬೇರೆ-ಬೇರೆ ಪ್ರಕಾಶನ ಸಂಸ್ಥೆಗಳಿಂದ ಪ್ರಕಟಗೊಂಡು ಪ್ರತಿಗಳೆಲ್ಲ ತೀರಿಹೋಗಿದ್ದ ಕನ್ನಡ-ಕನ್ನಡಿಗ-ಕರ್ನಾಟಕವೆಂಬ ಕೃತಿಯ ಮೂರನೇ ಮುದ್ರಣ ಇದಾಗಿದೆ. ಇದರಲ್ಲಿ ಎರಡು ಭಾಗಗಳಿವೆ. ಮೊದಲ ಭಾಗವು ಕನ್ನಡಪರ ಗೀತೆಗಳ ಸಂಕಲನವನ್ನೊಳಗೊಂಡ ಕನ್ನಡ ಶಕ್ತಿ. ಎರಡನೇ ಭಾಗವು ಮಾಹಿತಿ ರೂಪದ ಕನ್ನಡ-ಕನ್ನಡಿಗ-ಕರ್ನಾಟಕ ಒಂದು ಪಕ್ಷಿನೋಟ. ಕನ್ನಡಿಗರ ಸಂವಿಧಾನ ಎನಿಸಿಕೊಂಡಿರುವ ಕೃತಿಯನ್ನು ಓದುಗರಿಗೆ ನೀಡಿ ಕನ್ನಡಪರ ಭಾವನೆಯನ್ನು ಬಿತ್ತುವ ಸದುದ್ದೇಶ ಈ ಕೃತಿಯ ಪ್ರಕಟಣೆಯ ಹಿಂದಿದೆ.

ಕುವೆಂಪು, ತಿ.ನಂ.ಶ್ರೀ, ಹುಯಿಲಗೋಳ ನಾರಯಣರಾವ, ಪಂಪ, ಶಾಂತಕವಿ, ಎಂ.ಗೋವಿಂದ ಪೈ, ಬೆನಗಲ್ ರಾಮರಾವ, ಕೈಯ್ಯಾರ ಕಿಞ್ಞಣ್ಣರೈ, ಕಣವಿ, ಡಿ.ಎಸ್. ಕರ್ಕಿ, ಎಂ.ಗೋಪಾಲಕೃಷ್ಣ ಅಡಿಗ, ಕೆ.ಎಸ್. ನರಸಿಂಹ ಸ್ವಾಮಿ, ಮುಂತಾದ ಕವಿಗಳಿಂದ ರಚಿತಗೊಂಡ ೨೧ ಕನ್ನಡ ನಾಡು-ನುಡಿಪರ ಪ್ರಾತಿನಿಧಿಕ ಗೀತೆಗಳಿವೆ. ಕೇಳುಗರಲ್ಲಿ ಕನ್ನಡ ಪ್ರೇಮವನ್ನು ಮೂಡಿಸಿ ನರ ನಾಡಿಗಳಲ್ಲಿ ವಿಶಿಷ್ಟ ಶಕ್ತಿಸಂಚಾರವನ್ನು ಉಂಟುಮಾಡುತ್ತವೆ.

ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಕನ್ನಡ ಸಮಸ್ಯೆಗಳು, ಕನ್ನಡ ಚಳುವಳಿಯ ಇತಿಹಾಸ ಮತ್ತು ವ್ಯಾಪ್ತಿ, ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಅನುಸರಿಸಬೇಕಾದ ಭಾಷಾ ನೀತಿಯ ಅನುಷ್ಠಾನ, ದೈನಂದಿನ ಬದುಕಿನಲ್ಲಿ ಕನ್ನಡ ಮುಂತಾದ ವಿವರ ಪೂರ್ಣವಾದ ಉಪಯುಕ್ತ ಮಾಹಿತಿಗಳನ್ನು ಕೃತಿಯ ಎರಡನೇ ಭಾಗ ಒಳಗೊಂಡಿದೆ. ಡಾ. ಎಸ್.ಎಲ್. ಭೈರಪ್ಪನವರು ಹೇಳುವ ಹಾಗೆ "ಈ ಕೃತಿ ಕನ್ನಡಿಗರ ಅನಧೀಕೃತ ಸಂವಿಧಾನ"[೩] ವಾಗಿದೆ. ಕರ್ನಾಟಕದ ಬಗೆಗೆ ಚಿಂತನೆ ಮತ್ತು ಭವಿಷ್ಯದ ಬಗ್ಗೆ ಚಿಂತಿಸಲು ಈ ಕೃತಿ ಅವಕಾಶ ಕಲ್ಪಿಸುತ್ತದೆ. ಈ ಗ್ರಂಥಕ್ಕೆ ಕ.ರಾ.ರ.ಸಾ. ಸಂಸ್ಥೆ ಕೊಡಮಾಡುವ 'ರಾಮ ಜಾಧವ' ಪ್ರಶಸ್ತಿಯು ದೊರೆತಿದೆ.

**೩. ಕನ್ನಡಪರ ಚಿಂತನೆ ಮತ್ತು ಪರಂಪರೆ:** ಡಾ. ಕಾ.ವೆಂ. ಶ್ರೀನಿವಾಸಮೂರ್ತಿ

ಕನ್ನಡಪರ ಚಿಂತನೆಯನ್ನು ಹೊಂದಿರುವ ಈ ಕೃತಿ ಪಿ.ಎಚ್.ಡಿ.ಯ ಒಂದು ಸಂಶೋಧನಾ ಪ್ರಬಂಧವಾಗಿದೆ. ಇದನ್ನು ಡಾ.ಕಾ.ವೆಂ. ಶ್ರೀನಿವಾಸಮೂರ್ತಿಯವರು ತುಂಬ ಪರಿಶ್ರಮದಿಂದ ರಚಿಸಿದ್ದಾರೆ.

ಪಿ.ಎಚ್.ಡಿ. ಪದವಿಗಾಗಿ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಈ ಪ್ರಬಂಧವು ೭ ಅಧ್ಯಾಯಗಳನ್ನು ಒಳಗೊಂಡಿದೆ. ಕವಿರಾಜಮಾರ್ಗ ಮತ್ತು ನಾಡು-ನುಡಿ ಜಿಜ್ಞಾಸೆ, ಪ್ರಾಚೀನ ಕನ್ನಡ ಕಾವ್ಯ ಮತ್ತು ನಾಡು-ನುಡಿ ಚಿಂತನೆ, ಮಧ್ಯಕಾಲೀನ ಕನ್ನಡ ಕಾವ್ಯ ಮತ್ತು ಕನ್ನಡಾಭಿಮಾನದ ಸ್ವರೂಪ, ವಸಾಹತುಶಾಹಿ ಸಂಸ್ಕೃತಿ, ಕನ್ನಡ ಕಾವ್ಯ ಮತ್ತು ಕರ್ನಾಟಕತ್ವದ ವಿಕಾಸ, ನವ ವಸಾಹತು ಸಂದರ್ಭ, ಕನ್ನಡ ಕಾವ್ಯ ಮತ್ತು ನಾಡು-ನುಡಿ ಚಿಂತನೆ ಮುಂತಾದ ವಿಷಯಗಳನ್ನು ಶಾಸನ, ಹಸ್ತಪ್ರತಿ, ಪ್ರಾಚೀನ ಕಾವ್ಯ, ನಡುಗನ್ನಡ ಕವಿ ಕೃತಿಗಳು, ಮುಂತಾದವುಗಳ ಹಿನ್ನೆಲೆಯ ಕನ್ನಡಪರವಾದ ಚಿಂತನೆಗಳನ್ನು ಹಾಗೂ ಅದರ ಪರಂಪರೆಯನ್ನು ಸೋದಾಹರಣವಾಗಿ ತಿಳಿಸಿಕೊಡುವ ಅಮೂಲ್ಯ ಕೃತಿ ಇದಾಗಿದೆ.

ಅನುಬಂಧಗಳಲ್ಲಿ ಕನ್ನಡಿಗರು ದ್ರಾವಿಡರೇ, ಭಾಷೆ, ಧರ್ಮ, ಪ್ರಭುತ್ವ, ಕನ್ನಡದ ಅವಸ್ಥಾಂತರ, ಕನ್ನಡ ಚಳುವಳಿಯ ತಾತ್ವಿಕತೆ, ನಾಡು-ನುಡಿಯ ಬಗೆಗಿನ ವೈಚಾರಿಕ ವಿಚಾರಗಳನ್ನು ಲೇಖಕರು ನೀಡಿದ್ದಾರೆ. ಡಾ. ಕಾ.ವೆಂ. ಶ್ರೀನಿವಾಸಮೂರ್ತಿಯವರ

ಕನ್ನಡಪರ ಕಾಳಜಿ ಮತ್ತು ಒತ್ತಾಸೆಯನ್ನೊಳಗೊಂಡ ಇಂಥ ಕೃತಿ ಕನ್ನಡಿಗರ ಕೈಸೇರಬೇಕು ಎಂಬುದು ಪ್ರಕಾಶಕರ ಆಶಯವಾಗಿದೆ. ಚಿಂಚಣಿ ಶ್ರೀಮಠದ ಜಾಗೃತಿಮಾಲೆಯಲ್ಲಿ ಪ್ರಕಟಗೊಂಡ ಮಾಲೆಯಲ್ಲಿ ಇದು ಆಳವಾದ ಅಧ್ಯಯನದಿಂದ ಕೂಡಿದ ಕೃತಿಯಾಗಿದೆ.

**೪. ಆಧುನಿಕ ಕರ್ನಾಟಕದ ಆತಂಕಗಳು:** ರಾ. ನಂ. ಚಂದ್ರಶೇಖರ

ಕನ್ನಡಕ್ಕೆ ಪ್ರಸ್ತುತ ಸ್ಥಿತಿಯಲ್ಲಿ ಬಂದೊದಗಿದ ಆತಂಕಗಳನ್ನು ಕನ್ನಡಿಗರು ಯೋಚಿಸಬೇಕೆಂಬುದು ಮತ್ತು ಕನ್ನಡಿಗರು ತಮ್ಮ ಅಸ್ತಿತ್ವಕ್ಕಾಗಿ ಜಾಗೃತರಾಗಬೇಕು ಎಂಬುದು ಕೃತಿಯ ಆಶಯ. ಆದ್ದರಿಂದ ಈ ಕೃತಿಯು ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆಯ ಮೂಲಕ ಪ್ರಕಟಗೊಂಡಿದೆ. ೨೧ನೇ ಶತಮಾನದಲ್ಲಿ ಬದುಕುತ್ತಿರುವಾಗ ಕರ್ನಾಟಕಕ್ಕೆ ಬಂದೊದಗಿದ ಆತಂಕಗಳು, ಕೇಂದ್ರೀಕೃತ ಆಡಳಿತದಲ್ಲಿ ಕನ್ನಡಿಗರ ಸಮಸ್ಯೆ, ಅಖಂಡ ಕರ್ನಾಟಕದ ಸಮಗ್ರತೆ, ಪ್ರಾದೇಶಿಕ ಅಸಮಾನತೆಯ ವಾಸ್ತವ ನೆಲೆಗಳು, ಮಹೀಷಿ ವರದಿಯ ವಿವೇಚನೆ, ದೂರದರ್ಶನದಲ್ಲಿ ಕನ್ನಡದ ಸ್ಥಾನಮಾನ, ಹಿಂದಿ ಕಡ್ಡಾಯ ಹೇರಿಕೆ, ಕನ್ನಡ ಸಂಘಟನೆಯ ನೆಲೆ ಬೆಲೆಗಳು, ಕೈಗಾರಿಕೆ ಕಛೇರಿಗಳಲ್ಲಿ ಕನ್ನಡ ಸಂಘಗಳ ಅವಶ್ಯಕತೆಯ ವಿವೇಚನೆ, ವಲಸಿಗರಿಂದ ಕನ್ನಡಿಗರು ನಿರಾಶ್ರಿತರಾದ ವಾಸ್ತವ ಸ್ಥಿತಿ ಇನ್ನೂ ಮುಂತಾದ ಆತಂಕಗಳ ಸಮಗ್ರ ವಿವರಣೆ ಮತ್ತು ಪರಿಹಾರ ಕ್ರಮಗಳನ್ನು ಕೃತಿ ಒಳಗೊಂಡಿದೆ. ಅವಶ್ಯವಿದ್ದಲ್ಲಿ ಅಂಕಿ ಸಂಖ್ಯೆಗಳ ಮುಖೇನ ಲೇಖಕರು ಅಧೀಕೃತವಾಗಿ ಸಮಸ್ಯೆಯ ತೀವ್ರತೆಯನ್ನು ದಾಖಲಿಸಿ ಅಪೂರ್ವ ಮಾಹಿತಿಯನ್ನು ಒದಗಿಸಿದ್ದಾರೆ. ಇದು ಕನ್ನಡಿಗರು ತಮ್ಮ ಮುಂದಿನ ಆತಂಕಗಳನ್ನು ಅರಿತು ಚಿಂತನಶೀಲರಾಗಲು ಪ್ರೇರೇಪಿಸುವ ಕೃತಿಯಾಗಿದೆ. ಈ ಕೃತಿಗೆ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ ನೀಡುವ 'ರಾಮ ಜಾಧವ' ಪ್ರಶಸ್ತಿ ಲಭಿಸಿದೆ.

**೫. ದೈನಂದಿನ ಬದುಕಿನಲ್ಲಿ ಕನ್ನಡ:** ಸಂಗ್ರಹ–ಚಿಂಚಣಿ ಗಡಿಕನ್ನಡಿಗರ ಬಳಗದ ಸದಸ್ಯರು

ಇಂದಿನ ವೈಜ್ಞಾನಿಕ ಯುಗದಲ್ಲಿ ಬೃಹತ್ ಗಾತ್ರದ ಕೃತಿಗಳನ್ನು ಓದಲು ಬಿಡುವು ದೊರೆಯುವುದೇ ವಿರಳ. ದೊರೆತರೂ ಓದುವ ತಾಳ್ಮೆ ಇಲ್ಲ. ಈ ಹಿನ್ನೆಲೆಯಲ್ಲಿ ಈ ಕೃತಿ ಗಾತ್ರದಲ್ಲಿ ಚಿಕ್ಕದಾಗಿದೆ. ಜೇಬಿನಲ್ಲಿಟ್ಟುಕೊಂಡು ೫ ರಿಂದ ೧೦ ನಿಮಿಷಗಳಲ್ಲಿ ಓದಿ ಮುಗಿಸಬಹುದಾಗಿದೆ. ಆದರೆ ಇದರೊಳಗಿನ ಅಂಶಗಳು ಓದುಗರಲ್ಲಿ ಕನ್ನಡ ಪ್ರೇಮವನ್ನು ಪುಟಿದೇಳಿಸುವಂತಿವೆ.

ದೈನಂದಿನ ಬದುಕಿನಲ್ಲಿ ಕನ್ನಡ, ಸಂಘಟಣೆಯ ಸಂಬಂಧಿ ವಿಷಯ, ಕನ್ನಡಪರ ಸಂಘಸಂಸ್ಥೆಗಳು ಮತ್ತು ಕಾರ್ಯಕರ್ತರು ಕೈಕೊಳ್ಳಬೇಕಾದ ಸಂಕಲ್ಪ, ಕನ್ನಡ ರಾಜ್ಯೋತ್ಸವ ಆಚರಿಸುವ ಬಗೆ, ನಾಮ ಫಲಕ, ಸರ್ಕಾರಿ ಆಜ್ಞೆ, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ರೂಪುರೇಷೆಗಳು, ಕನ್ನಡಕ್ಕೆ ಸಂಬಂಧಿಸಿದ ಕೆಲ ಮಹತ್ವದ ಘಟನೆಗಳು,

ಕನ್ನಡ–ಕನ್ನಡಿಗರು–ಕರ್ನಾಟಕ ಕವಿಗಳು ಕಂಡಂತೆ, ಕನ್ನಡಪರ ಘೋಷಣೆ ಮುಂತಾದ ವಿಷಯಗಳು ಕೃತಿಯಲ್ಲಿ ಸಂಕ್ಷಿಪ್ತವಾಗಿ ಮತ್ತು ಸರಳವಾಗಿ ಮೂಡಿ ಬಂದಿವೆ. 'ಗಾತ್ರದಲ್ಲಿ ವಾಮನನಾದರೂ, ಪರಿಣಾಮದಲ್ಲಿ ತ್ರಿವಿಕ್ರಮ' ಎಂಬ ನುಡಿಗೆ ಕೃತಿ ನಿದರ್ಶನ ವೆನಿಸಿದೆ. "ಚಿಂಚಣಿ ಸಿದ್ಧಸಂಸ್ಥಾನ ಮಠದ ಗಡಿಕನ್ನಡಿಗರ ಬಳಗದ ಅಧ್ಯಕ್ಷರಾದ ಭರತ ಕುಂಬಾರ ಅವರು ತಮ್ಮ ಮಗಳ ಮೊದಲ ಹುಟ್ಟು ಹಬ್ಬದ ನೆನಹಿನಲ್ಲಿ ಗ್ರಂಥದಾನ ಗೈಯ್ದಿದ್ದಾರೆ"[೪]. ಹುಟ್ಟು ಹಬ್ಬವನ್ನು ಹೇಗೆ ಅರ್ಥಪೂರ್ಣವಾಗಿ ಆಚರಿಸಬಹುದು ಎಂಬುದುಕ್ಕೆ ಈ ಕೃತಿ ಒಳ್ಳೆಯ ಸಾಕ್ಷಿಯಾಗಿದೆ.

**೬. ಕನ್ನಡತನ ಮತ್ತು ಭಾರತೀಯತೆ:** ಡಾ. ಪಿ.ವ್ಹಿ.ನಾರಾಯಣ

"ಆರೋಗ್ಯಕರ ಪ್ರಾದೇಶಿಕ ಚಿಂತನೆಯಿಂದ ಮಾತ್ರ ಸಮಾನತೆಯ ಮೇಲೆ ವಿವಿಧ ಪ್ರಾದೇಶಿಕತೆಗಳು ಒಗ್ಗೂಡಿದಾಗ ಮಾತ್ರ ಭಾರತವು ತನ್ನ ಸಮಗ್ರತೆಯನ್ನು ಕಾಪಾಡಿಕೊಳ್ಳಲು ಸಾಧ್ಯ"[೫] ಎಂಬ ಅಚಲ ನಂಬಿಕೆಯು ಈ ಕೃತಿಯಲ್ಲಿ ಮೈದೋರಿ ಗಟ್ಟಿಗೊಂಡಿದೆ. ವಿವಿಧ ಕೃತಿಗಳಿಂದ ಹಾಗೂ ಇತಿಹಾಸದ ಆಧಾರಗಳಿಂದ ಉಕ್ತಗೊಂಡ ಕನ್ನಡ ನಾಡಿನ ಪರಿಕಲ್ಪನೆ, ಕನ್ನಡತನ ಮತ್ತು ಭಾರತೀಯತೆ, ಭಾರತಕ್ಕೆ ಬೇಕಾದ ರಾಜಕೀಯ ವ್ಯವಸ್ಥೆ, ಭಾರತವು ಅನುಸರಿಸಬೇಕಾದ ಭಾಷಾನೀತಿ, ೮೦ರ ದಶಕದ ಕನ್ನಡ ಚಳುವಳಿ ಮುಂತಾದ ಭಾಗಗಳನ್ನೊಳಗೊಂಡ ಈ ಕೃತಿಯು; ಕರ್ನಾಟಕವು ಬೇರೆ ಬೇರೆ ರಾಜರ ಆಳ್ವಿಕೆಗೆ ಒಳಗಾಗಿದ್ದರೂ ಕನ್ನಡತನವನ್ನು ಬಿಟ್ಟು ಕೊಡದೇ ದೃಢವಾಗಿ ನಿಂತ ಬಗೆಯನ್ನು ಆಧಾರ ಸಹಿತವಾಗಿ ವಿವರ ನೀಡುತ್ತದೆ.

'ಕನ್ನಡತನ' ಸ್ಥಾಯಿಯಾದರೆ, 'ಭಾರತೀಯತೆ' ಸಂಚಾರಿ ಸ್ವರೂಪದ್ದು. "ನಾನು ಮೊದಲು ಕನ್ನಡಿಗ, ನಂತರ ಭಾರತೀಯ" ಎಂಬ ಗ್ರಹಿಕೆಯು ಕೃತಿಯ ಹೃದಯವಾಗಿದೆ. ಗೋಕಾಕ ಚಳುವಳಿಯ ಏಳುಬೀಳುಗಳ ಸಮಗ್ರ ವಿವರಣೆಯನ್ನು ನೀಡುವ ಮೂಲಕ ಕೃತಿಯು 'ಕನ್ನಡತನ ಮತ್ತು ಭಾರತೀಯತೆ' ಯ ಬಗೆಗೆ ಅರ್ಥಪೂರ್ಣ ವಿಚಾರವನ್ನು ಮಂಡಿಸುವಲ್ಲಿ ಯಶಸ್ವಿಯಾಗಿದೆ.

**೭. ಕನ್ನಡ–ಕನ್ನಡ ಬರ್ರಿ ನಮ್ಮ ಸಂಗಡ:** ಪ್ರೊ.ಚಂದ್ರಶೇಖರ ಪಾಟೀಲ

ಈಗಾಗಲೇ ಈ ಕಿರು ಕೃತಿ ಕ.ರಾ.ರ.ಸಾ.ಸಂಸ್ಥೆ ಕೇಂದ್ರ ಕನ್ನಡ ಸಮಿತಿಯ ಮೂಲಕ ಮೊದಲ ಮುದ್ರಣವಾಗಿದ್ದು, ಪ್ರಸ್ತುತ ೨ನೆಯ ಮುದ್ರಣವನ್ನು ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ ಮಾಡಿದೆ. ಶ್ರೀ ಅಶೋಕ ಹೊನವಾಡ ಅವರ ಮನೆ 'ಕಾಯಕ' ಪ್ರವೇಶ ಸಮಾರಂಭದಲ್ಲಿ ಕೃತಿ ಮುದ್ರಣಗೊಂಡು ಬಿಡುಗಡೆ ಹೊಂದಿದೆ.

ಚಿಕ್ಕ ಕೃತಿಯಲ್ಲಿ ಕನ್ನಡ ನಾಡು–ನುಡಿ–ಜನತೆಯ ಬಗ್ಗೆ ವಿಭಿನ್ನ ವಿಚಾರಧಾರೆಗಳಿವೆ. ಈ ಎಲ್ಲ ವಿಚಾರಧಾರೆಗಳು ಚಂಪಾ ಅವರು ಬೇರೆ ಬೇರೆ ಪತ್ರಿಕೆಗಳಿಗೆ ಬರೆದ ಸಾಂದರ್ಭಿಕ ಲೇಖನಗಳ ಸಂಕಲನ ರೂಪವಾಗಿದೆ.

ಕನ್ನಡ ಭಾಷೆ, ಭಾಷಾಭಿಮಾನ, ಕನ್ನಡ ರಾಜ್ಯೋತ್ಸವ ನಾಡಹಬ್ಬ, ರಾಷ್ಟ್ರೀಯತೆ, ಪ್ರಾದೇಶಿಕತೆ, ಸ್ವಾಯತ್ತತೆ, ಕನ್ನಡ ಚಳುವಳಿಯ ಸಂಘಟನೆಗಳು, ಗೋಕಾಕ ಚಳುವಳಿ– ಅದರ ಹಾಡು, ಮಾತೃ ಭಾಷಾ ಶಿಕ್ಷಣ ಮಾಧ್ಯಮ, ಪಂಪ ರನ್ನ ವಿಡಂಬನಾತ್ಮಕ ಗೀತೆ, ಗಡಿ ಕನ್ನಡಿಗರು, ಅನ್ಯ ಭಾಷಿಕರು–ಕನ್ನಡೇತರರು, ಪ್ರತ್ಯೇಕತೆಯ ಬೇಡಿಕೆ ಮುಂತಾದ ಅಧ್ಯಾಯಗಳನ್ನೊಳಗೊಂಡ ಕೃತಿಯು ಕನ್ನಡ ನಾಡು–ನುಡಿಯ ಬಗೆಗೆ ನಿಖರವಾದ ಮತ್ತು ಸಂಕ್ಷಿಪ್ತವಾದ ಮಾಹಿತಿಯನ್ನು ನೀಡುತ್ತದೆ. ಅದರ ಜೊತೆಗೆ ಕೈಗೊಳ್ಳಬೇಕಾದ ಯೋಜನೆಗಳ ಬಗ್ಗೆ ಮಾರ್ಗದರ್ಶನವನ್ನು ನೀಡುತ್ತದೆ. ಪ್ರತಿಯೊಬ್ಬರು ನಿತ್ಯ ಜೀವನದಲ್ಲಿ ಕನ್ನಡವನ್ನು ಮಾತನಾಡುತ್ತಾ ಭಾಷೆಯ ಹಾಗೂ ಸಂಸ್ಕೃತಿಯ ಉಳಿವಿಗೆ ಶ್ರಮಿಸಲು ಕೃತಿ ಕರೆ ನೀಡುತ್ತದೆ. "ಸತ್ತಂತಿಹರನು ಬಡಿದೆಚ್ಚರಿಸು" ಎಂಬ ಕುವೆಂಪುರವರ ಕವಿತೆಯ ಸಾಲುಗಳ ಆಶಯದಂತೆ ಕನ್ನಡಿಗರನ್ನು ಜಾಗೃತಗೊಳಿಸಬೇಕೆಂಬ ಅನಿವಾರ್ಯತೆಯು ಕೃತಿಯಲ್ಲಿ ಒಡಮೂಡಿ ನಿಂತಿದೆ.

**೮. ಕನ್ನಡ ಕಾಯಕಯೋಗಿ ಡಾ. ಶಿವಬಸವ ಸ್ವಾಮೀಜಿ:** ಡಾ. ಬಸವರಾಜ ಜಗಜಂಪಿ.

"ಲಿಂ. ಡಾ. ಶಿವಬಸವ ಸ್ವಾಮೀಜಿ ಅವರು ಬೆಳಗಾವಿಯನ್ನು ತಮ್ಮ ಕಾರ್ಯಕ್ಷೇತ್ರದ ಸ್ಥಾನವಾಗಿಟ್ಟುಕೊಂಡು 'ಮಾತು ಬೆಳ್ಳಿ, ಮೌನ ಬಂಗಾರ' ವೆಂಬಂತೆ ಕೆಲಸ ಮಾಡಿದವರು. ಬೆಳಗಾವಿಯಲ್ಲಿನ ಕನ್ನಡಿಗರಿಗೆ ಅಭಿಮಾನ ಆತ್ಮ ಸ್ಥೈರ್ಯ ತುಂಬಿ ಕನ್ನಡದ ಜೀವಂತಿಕೆಗೆ ಪಾತ್ರರಾದವರು. ಪೂಜ್ಯರು ನೂರು ವರ್ಷದ ಸಾರ್ಥಕ ಬದುಕಿನಲ್ಲಿ ಕನ್ನಡ ಕೈಂಕರ್ಯ ಶ್ಲಾಘನೀಯವಾದುದು"[೬] ತನ್ನಿಮಿತ್ತ ಚಿಂಚಣಿಯ ಪ್ರಕಾಶನ ಸಂಸ್ಥೆಯು ಈ ಕೃತಿಯನ್ನು ಪ್ರಕಾಶನಗೊಳಿಸಿದೆ. ನಾಡು–ನುಡಿಗೆ ನಿರಂತರ ಹೋರಾಡಿದ ಧೀಮಂತ ಚೇತನವೊಂದನ್ನು ಈ ಕೃತಿ ಪರಿಚಯಿಸುತ್ತದೆ.

ಕೃತಿ ಒಟ್ಟು ೧೯ ಅಧ್ಯಾಯಗಳಲ್ಲಿ ಮೈದಳೆದಿದೆ. ರುದ್ರಾಕ್ಷಿ ಮಠದ ಪರಿಚಯ, ವಿದ್ಯಾರ್ಥಿ ಪ್ರಸಾದನಿಲಯ, ಡಾ. ಶಿವಬಸವ ಸ್ವಾಮಿಗಳ ಪರಿಚಯ, ಫಜಲ್ ಅಲಿ ಆಯೋಗ ಮತ್ತು ಸ್ವಾಮೀಜಿ, ನಾಡಹಬ್ಬದ ನೇತಾರರು, ವೀರಶೈವ ಅಧ್ಯಯನ ಅಕಾಡೆಮಿ, ಲಿಂಗಾಯತ ಸಂಶೋಧನಾ ಕೇಂದ್ರ ಗ್ರಂಥಾಲಯ, ವಚನ ಪಿತಾಮಹರಿಗೆ ಗೌರವ, ಕನ್ನಡ ಕವಿ ಲೇಖಕರು ಕಂಡಂತೆ ಸ್ವಾಮೀಜಿ ಮುಂತಾದ ಅಧ್ಯಾಯಗಳಲ್ಲಿ ಸ್ವಾಮಿಗಳು ಮಾಡಿದ ಕನ್ನಡದ ಕಾಯಕ ಸಾಕಾರಗೊಂಡಿದೆ. ಬೆನ್ನುಡಿಯಲ್ಲಿನ ಬಸವರಾಜ ಕಟ್ಟಿಮನಿ ಅವರ ಕವಿತೆ 'ಗಡಿನಾಡ ರುದ್ರ' ಡಾ. ಶಿವಬಸವ ಸ್ವಾಮಿಗಳ ರೌದ್ರಾವೇಶವನ್ನು, ಕನ್ನಡ ಕಟ್ಟುವಲ್ಲಿ ತೋರಿದ ಕೆಚ್ಚನ್ನು ಮತ್ತು ಪ್ರೇಮವನ್ನು ಬಿಂಬಿಸುತ್ತದೆ. ಬೆಳಗಾವಿಯಲ್ಲಿ ಇಂದು ಕನ್ನಡ ಜನ, ಕನ್ನಡ ನುಡಿ ಉಳಿಯಲು

ಶ್ರಮಿಸಿದ ಮಹನೀಯರಲ್ಲಿ ಕನ್ನಡ ಕಾಯಕಯೋಗಿ ಡಾ.ಶಿವಬಸವ ಸ್ವಾಮೀಜಿಗಳು ಒಬ್ಬರೆಂಬುದನ್ನು ಈ ಕೃತಿಯು ಮನಗಾಣಿಸುತ್ತದೆ.

**೯. ಕನ್ನಡ ಕೋಟೆ ಕೆ.ಎಲ್.ಇ.:** ಪ್ರೊ. ಬಿ. ಎಸ್. ಗವಿಮಠ

ಕನ್ನಡಕ್ಕಾಗಿ ಕೆ.ಎಲ್.ಇ ಸಂಸ್ಥೆಯು ಮಾಡಿದ ಕೆಲಸ ಕಾರ್ಯಗಳನ್ನು ಪರಿಚಯಿಸುವ ಒಂದು ನೋಟ ಈ ಕೃತಿಯಲ್ಲಿ ನಮಗೆ ಲಭಿಸುತ್ತದೆ. ಕೃತಿಯು ಒಟ್ಟು ೧೫ ಅಧ್ಯಾಯಗಳನ್ನು ಒಳಗೊಂಡಿದೆ. ಕೆ.ಎಲ್.ಇ ಸಂಸ್ಥೆಯ ಸ್ಥಾಪನೆಯ ಹಿನ್ನೆಲೆ, ಸಪ್ತರ್ಷಿಗಳ ಪರಿಚಯ, ವೀರಶೈವ ತರುಣಸಂಘ, ಕನ್ನಡಿಗರ ಸಂಘಟನೆ, ಪತ್ರಿಕೋದ್ಯಮ ಹಾಗೂ ಗ್ರಂಥ ಪ್ರಕಟಣೆ, ಬೆಳಗಾವಿಯಲ್ಲಿ ನಾಡಹಬ್ಬ, ಜವಾಹರಲಾಲ ನೆಹರು ಮೆಡಿಕಲ್ ಕಾಲೇಜಿನ ಕನ್ನಡಬಳಗ, ಗಡಿಭಾಗದಲ್ಲಿ ಕನ್ನಡ ಕಹಳೆ, ಶಿಕ್ಷಣ ವಿಕಾಸ ಐತಿಹಾಸಿಕ ಘಟ್ಟಗಳು ಇನ್ನೂ ಮುಂತಾದ ಭಾಗಗಳಲ್ಲಿ ಕೆ.ಎಲ್.ಇ ಸಂಸ್ಥೆ ಮಾಡಿದ ಮತ್ತು ಮಾಡುತ್ತಿರುವ ಕನ್ನಡಪರ ಕಾರ್ಯಗಳನ್ನು ಶಿಸ್ತುಬದ್ಧವಾಗಿ ಪರಿಚಯಿಸಲಾಗಿದೆ.

ಕನ್ನಡ ರಕ್ಷಣೆಗಾಗಿ ಹಾಕಿಕೊಂಡ ಯೋಜನೆಗಳು, ಸಂಘಟನೆಯ ಮೂಲಕ ಕನ್ನಡವನ್ನು ಕಟ್ಟುವ ಕಾರ್ಯದಲ್ಲಿ ಕೆ.ಎಲ್.ಇ ಸಂಸ್ಥೆವಹಿಸಿದ ಗುರುತರವಾದ ಕಾರ್ಯವನ್ನು ಬಿಂಬಿಸುವಲ್ಲಿ ಈ ಕೃತಿ ಯಶಸ್ವಿಯಾಗಿದೆ. ಒಂದು ಶಿಕ್ಷಣ ಸಂಸ್ಥೆಯು ಶಿಕ್ಷಣವನ್ನು ನೀಡುವುದರೊಂದಿಗೆ ನಾಡು-ನುಡಿಯನ್ನು ಹೇಗೆ ರಕ್ಷಿಸಬೇಕೆಂಬುದನ್ನು ತಿಳಿಯಲು ಈ ಕೃತಿಯು ಸಹಾಯಕವಾಗಿದೆ.

**೧೦. ಕನ್ನಡದ ಜಗದ್ಗುರು:** ಪ್ರೊ. ಚಂದ್ರಶೇಖರ ವಸ್ತ್ರದ

ಸ್ವಾಮಿಗಳು ಕೇವಲ ಮಠದಲ್ಲಿ ಕುಳಿತು ಪೂಜೆ, ಪುರಾಣ, ಧರ್ಮ ಆಚರಣೆಗಳಿಗೆ ಸೀಮಿತರಾಗದೇ ನಾಡು-ನುಡಿಯ ಪ್ರಶ್ನೆ ಬಂದಾಗ ಬೀದಿಗಿಳಿದು ಹೋರಾಡಬೇಕೆಂಬುದು ತೋಂಟದ ಜಗದ್ಗುರು ಡಾ. ಸಿದ್ಧಲಿಂಗ ಸ್ವಾಮಿಗಳ ಅಭಿಮತ. ಇಂತಹ ಮಹಾನ್ ಕನ್ನಡ ಜಗದ್ಗುರುಗಳ ನುಡಿಪ್ರೇಮವನ್ನು ಕನ್ನಡ ಜನತೆಗೆ ಅರುಹಿಸುವ ಪ್ರಯತ್ನವೇ ಅಲ್ಲಮಪ್ರಭು ಪ್ರಕಾಶನದಿಂದ ಹೊರಬಂದ ಈ ಕೃತಿ.

ಪ್ರಸ್ತುತ ಕೃತಿಯು ಜಗದ್ಗುರುಗಳ ಬಾಲ್ಯಜೀವನ ವಿದ್ಯಾಭ್ಯಾಸ, ಗೋಕಾಕ ಚಳುವಳಿಯಲ್ಲಿ ಪಾಲ್ಗೊಂಡ ಬಗೆ, ಕನ್ನಡಪರ ಸರ್ವತೋಮುಖ ಚಿಂತನೆ, ಇವನಾರವ ಇವನಾರವ ಎಂದೆನಿಸದಿರಯ್ಯಾ, ಕೋಮು ಸೌಹಾರ್ದತೆಗೆ ವಿಶೇಷ ಆದ್ಯತೆ, ಸಂಸ್ಕೃತಿ ದಾಸೋಹ, ನುಡಿದಾಸೋಹ, ಶಿಕ್ಷಣ ದಾಸೋಹ, ಪುಸ್ತಕ ದಾಸೋಹ ಮುಂತಾದ ವಿಷಯಗಳನ್ನು ಸಮರ್ಪಕವಾಗಿ ತಿಳಿಸಿಕೊಡುತ್ತದೆ. ಗೋಕಾಕ ಚಳುವಳಿಯಲ್ಲಿ ಬೀದಿಗಿಳಿದು ಹೋರಾಟ ಮಾಡಿದ ಶ್ರೀಗಳ ಕನ್ನಡಪರ ಕಾಳಜಿಯು ಕೃತಿಯಲ್ಲಿ ವರ್ಣಿತವಾಗಿದೆ. ಲಿಂಗಾಯತ ಅಧ್ಯಯನ ಸಂಸ್ಥೆಯ ಮೂಲಕ ಮೌಲಿಕ

ಕೃತಿಗಳನ್ನು ಪ್ರಕಟಿಸಿ ಕನ್ನಡ ಪುಸ್ತಕ ಸಂಸ್ಕೃತಿಯನ್ನು ಮೆರೆದ ಜಗದ್ಗುರುಗಳ ಮಹಾನ್ ಕಾರ್ಯ ಕೃತಿಯಲ್ಲಿದೆ.

" ಗೋಕಾಕ ವರದಿಯನ್ನು ಜಾರಿಗೆ ತರುವ ಸಲುವಾಗಿ ಹೋರಾಟಕ್ಕೆ ಸನ್ನದ್ಧರಾಗಿ ನಿಮ್ಮ ನರನಾಡಿಗಳಲ್ಲಿ ಪೌರುಷವಿದ್ದರೆ ಕೂಡಲೇ ಸಿದ್ಧರಾಗಿ. ಕನ್ನಡ ಅಗ್ರಪೂಜೆ ಎಂಬುದನ್ನು ಸಾಬೀತುಪಡಿಸಿ, ಜಾತಿ-ಮತ-ಪಂಥ ಭೇದಗಳನ್ನು ಬದಿಗೊತ್ತಿ ಉಗ್ರಹೋರಾಟ ಪ್ರಾರಂಭಿಸಿ"[೭] ಎಂಬ ಕನ್ನಡ ಜಗದ್ಗುರುಗಳ ಸಿಂಹ ಗರ್ಜನೆ ಹಾಗೂ ಕನ್ನಡದ ಕೆಚ್ಚು ಈ ಕೃತಿಯುದ್ದಕ್ಕೂ ಮಾರ್ಧನಿಗೊಂಡಿದೆ.

**೧೧. ಕವಿ ಕಣವಿ ಸಂದರ್ಶನ:** ಸಂ. ಡಾ. ಜಿ.ಎಂ.ಹೆಗಡೆ

ಆಧುನಿಕ ಕನ್ನಡ ಕಾವ್ಯ ಪರಂಪರೆಯ ಶ್ರೇಷ್ಠ ಕವಿಗಳಲ್ಲಿ ಒಬ್ಬರಾದ ಚೆನ್ನವೀರ ಕಣವಿಯವರಿಗೆ ೭೫ ವರ್ಷ ತುಂಬಿದಾಗ ಸವಿ ನೆನಹಿನ ಕುರುಹಾಗಿ ಈ ಕೃತಿಯನ್ನು ಕನ್ನಡ ಜಾಗೃತಿ ಪುಸ್ತಕ ಮಾಲೆ ಹೊರತಂದಿದೆ.

ಕೃತಿ ೨ ಭಾಗಗಳಲ್ಲಿ ವಿನ್ಯಾಸಗೊಂಡಿದೆ. ಮೊದಲ ಭಾಗದಲ್ಲಿ ವಿವಿಧ ಲೇಖಕರು ಚೆನ್ನವೀರ ಕಣವಿಯವರೊಂದಿಗೆ ವಿವಿಧ ಸಂದರ್ಭಗಳಲ್ಲಿ ನಡೆಸಿದ ಸಂದರ್ಶನ ಲೇಖನಗಳಿವೆ. ೨ನೆಯ ಭಾಗದಲ್ಲಿ ಕೆಲವು ಲೇಖಕಿಯರು ಶಾಂತಾದೇವಿ ಕಣವಿಯವರನ್ನು ಸಂದರ್ಶಿಸಿ, ಪತಿಯ ಬಗ್ಗೆ ಶಾಂತಾದೇವಿಯವರ ವಿಚಾರ ಧಾರೆಗಳನ್ನು ಕಲೆಹಾಕಿದ್ದಾರೆ. ಒಟ್ಟು ಕೃತಿಯ ಮೊದಲ ಭಾಗ ೧೬ ಅಧ್ಯಾಯಗಳನ್ನು ಹಾಗೂ ೨ನೆ ಭಾಗ ೩ಅಧ್ಯಾಯಗಳನ್ನು ಒಳಗೊಂಡಿದೆ.

ಸಮಕಾಲೀನ ಸಮಯ ಪ್ರಜ್ಞೆಯ ಕವಿ, ಪ್ರೀತಿ ಸ್ನೇಹದ ಅನನ್ಯ ಕವಿ, ಮಾನವೀಯ ನೆಲೆಗಳಿಗಾಗಿ ತುಡಿತ, ಭಾರತೀಯತೆ ಪುನಃಶೋಧ ಜಾತ್ರೆಯಲ್ಲಿ ಪವಿತ್ರ ಯಾತ್ರೆ, ನನ್ನ ಪ್ರೀತಿಯ ಜೀವನ ಸಂಗಾತಿ ಇನ್ನೂ ಮುಂತಾದ ಭಾಗಗಳು ಕೃತಿಯಲ್ಲಿ ಸೇರಿವೆ. ಕವಿಕರ್ಮದ ರಹಸ್ಯದ ಒಳನೋಟ, ಕನ್ನಡ ಕಾವ್ಯ ಸಂದರ್ಭದಲ್ಲಿ ಕಣವಿ ವಿಚಾರ ಧಾರೆ, ಕವಿಯ ಬೆಳವಣಿಗೆಯ ದರ್ಶನ, ಜೀವನದ ವಸ್ತು ನಿಷ್ಠ ಅವಲೋಕನ, ಸಮಕಾಲೀನರನ್ನು ಸಹೃದಯತೆಯಿಂದ ಕಾಣುವ ಗುಣ, ಕಾವ್ಯಲೋಕದ ವಾರಸುದಾರತ್ವ ಮುಂತಾದ ಅಂಶಗಳನ್ನು ಈ ಸಂದರ್ಶನದ ಸಂಕಲನದಲ್ಲಿ ಕಾಣುತ್ತೇವೆ. ನಾಡು-ನುಡಿ ಬಗೆಗಿನ ಚಿಂತನೆಗಳು ಈ ಕೃತಿಯಲ್ಲಿ ಸೇರಿಕೊಂಡಿವೆ.

ನಾಡಿನ ಪ್ರಮುಖ ವಿದ್ವಾಂಸರುಗಳಾದ ಸಿದ್ದರಾಜ ಪೂಜಾರಿ, ಜಿ.ಎಂ.ಹೆಗಡೆ, ಶ್ಯಾಮ ಸುಂದರ ಬಿದರಕುಂದಿ, ಗುರುಲಿಂಗ ಕಾಪಸೆ, ವೀಣಾ ಶಾಂತೇಶ್ವರ, ಸಿದ್ದಲಿಂಗ ಪಟ್ಟಣಶೆಟ್ಟಿ ಮುಂತಾದವರು ಕಣವಿಯವರ ಹಾಗೂ ಶ್ರೀಮತಿ ಕಣವಿಯವರ ಬಾಳ

ಬುತ್ತಿಯನ್ನು ಓದುಗರಿಗೆ ಉಣಬಡಿಸಿದ್ದಾರೆ. ಕಣವಿಯವರ ಕಾವ್ಯದ ಬದುಕನ್ನು ತೆರೆದು ತೋರುವಲ್ಲಿ ಈ ಕೃತಿಯು ಫಲಕಾರಿಯಾಗಿದೆ.

**೧೨. ರಂಗಭೂಮಿಯ ಕನ್ನಡ ಸಂವೇದನೆ:** ಡಾ. ರಾಮಕೃಷ್ಣ ಮರಾಠೆ

"ರಂಗಭೂಮಿಯು ಒಂದು ಕಾಲಕ್ಕೆ ಸಾಂಸ್ಕೃತಿಕ ಪ್ರತಿನಿಧಿಯಾಗಿ ಕೆಲಸ ಮಾಡುವುದರ ಜೊತೆಗೆ ಕನ್ನಡ ಭಾಷಾ ಬೆಳವಣಿಗೆಗೆ ಹಾಗೂ ಪೋಷಣೆಯಲ್ಲಿ ಬಹು ಮುಖ್ಯಪಾತ್ರ ವಹಿಸಿದೆ"[೮] ಅಂತಹ ರಂಗಭೂಮಿಯ ಕನ್ನಡ ಕಾರ್ಯವನ್ನು ಜನತೆಗೆ ಪರಿಚಯಿಸುವ ಉದ್ದೇಶದಿಂದ ಶ್ರೀ ಮಠವು ಈ ಕೃತಿಯನ್ನು ಪ್ರಕಾಶನಗೊಳಿಸಿದೆ.

ಪ್ರಸ್ತುತ ಹೊತ್ತಿಗೆಯು ೬ ಅಧ್ಯಾಯಗಳನ್ನು ಹೊಂದಿದೆ. ಪೂರ್ವ ರಂಗ, ರಂಗ ಸಂವೇದನೆ, ಮರಾಠಿಮಯವಾಗಿದ್ದ ಉತ್ತರ ಕರ್ನಾಟಕ, ಮೈಸೂರು ಭಾಗದ 'ಕರ್ನಾಟಕ ನಾಟಕ ಸಭಾ'ಗಳು, ಹೊರನಾಡಿನಲ್ಲಿ ಕನ್ನಡ ನಾಟಕ ಕಂಪನಿಗಳು, ಕರ್ನಾಟಕ ಏಕೀಕರಣ ಮತ್ತು ಕಲಾವೈಭವ ಮುಂತಾದ ಅಧ್ಯಾಯಗಳಲ್ಲಿ ಮೂಡಿಬಂದಿದೆ. ಕನ್ನಡ ರಂಗಭೂಮಿಯ ಪೂರ್ವ ಸ್ಥಿತಿ, ಮರಾಠಿ ಪರಿಸರದಲ್ಲಿ ಕನ್ನಡ ರಂಗಭೂಮಿ ಚಿಗುರೊಡೆದ ರೀತಿ, ಕನ್ನಡ ಕಂಪು ಸೂಸುವಲ್ಲಿ ಕೃತಪುರ ನಾಟಕ ಮಂಡಳಿ, ಹಲಸಿ ಕಂಪನಿ ಮುಂತಾದವುಗಳ ಪಾತ್ರ ಬಿಂಬಿತವಾಗಿದೆ. ಹೊರನಾಡಿನಲ್ಲಿ ಕನ್ನಡ ಕಂಪು ಬೀರುವಲ್ಲಿ ಕನ್ನಡ ಕಂಪನಿ ನಾಟಕಗಳ ಪಾತ್ರ, ಏಕೀಕರಣದಲ್ಲಿ ನಾಟಕ ಕಂಪನಿಗಳ ಪಾಲ್ಗೊಳ್ಳುವಿಕೆ ಮುಂತಾದ ವಿಷಯಗಳ ಚಿತ್ರಣ ಈ ಕೃತಿಯುದ್ದಕ್ಕೂ ಹರಡಿಕೊಂಡಿದೆ. ಶಾಂತಕವಿಗಳು, ಕೊಣ್ಣೂರ ನಾಟಕ ಮಂಡಳಿ, ಏಣಗಿ ಬಾಳಪ್ಪನವರ ನಾಟಕ ಮಂಡಳಿ ಇನ್ನೂ ಹಲವಾರು ಕನ್ನಡ ನಾಟಕ ಕಂಪನಿಗಳ ಮತ್ತು ಕಲಾವಿದರ ಕನ್ನಡ ಪ್ರೇಮವು ಪ್ರಸ್ತುತ ಕೃತಿಯಲ್ಲಿ ಕಂಡು ಬರುತ್ತದೆ.

ರಂಗಭೂಮಿಯೊಂದಿಗೆ ಕನ್ನಡ ಭಾಷೆ ಮತ್ತು ಸಂಸ್ಕೃತಿಯು ವಿಕಾಸಗೊಂಡ ಪರಿಯನ್ನು ಕೃತಿಯು ಪರಿಚಯಿಸುತ್ತದೆ. ರಂಗಭೂಮಿಯು ಕೇವಲ ಮನರಂಜನೆಯ ಸಾಧನವಲ್ಲ; ಅದು ಸಂಸ್ಕೃತಿಯ ರಾಯಭಾರಿ ಎಂಬುದಕ್ಕೆ ಈ ಕೃತಿಯು ಸಾಕ್ಷಿಯಾಗಿದೆ.

**೧೩. ಮಹಾಜನ ವರದಿ ಅವಲೋಕನ:** ಡಾ. ಓಂಕಾರ ಕಾಕಡೆ

ಕರ್ನಾಟಕ, ಮಹಾರಾಷ್ಟ್ರ ಮತ್ತು ಕೇರಳ ಗಡಿವಿವಾದ ಕುರಿತು ನೇಮಕಗೊಂಡ ನ್ಯಾಯಮೂರ್ತಿ ಮೇಹರ್ ಚಂದ ಮಹಾಜನ ಅವರ ವರದಿಯ ಸ್ಥೂಲ ಪರಿಚಯ ಹಾಗೂ ಅದರ ಸಾಧಕ ಬಾಧಕಗಳನ್ನು ಒಳಗೊಂಡ ಕೃತಿಯಿದಾಗಿದೆ. ಕರ್ನಾಟಕದ ಗಡಿಯನ್ನು ನಿರ್ದಿಷ್ಟಗೊಳಿಸುವಲ್ಲಿ ಈ ಕೃತಿ ಸಹಾಯಕವಾಗಿದೆ. ಆದ್ದರಿಂದ ಶ್ರೀ ಮಠವು 'ಕನ್ನಡ ಜಾಗೃತಿ ಪುಸ್ತಕಮಾಲೆ ಯೋಜನೆ'ಯಡಿಯಲ್ಲಿ ಹೊರತಂದಿದೆ.

ಮಹಾಜನ ವರದಿಯ ಸಮಗ್ರವಾದ ಪರಿಚಯವನ್ನು ಕನ್ನಡಿಗರಿಗೆಲ್ಲ ಪರಿಚಯಿಸುವುದೇ ಈ ಕೃತಿಯ ಮುಖ್ಯ ಆಶಯವಾಗಿದೆ.

ಈ ಕೃತಿಯು ಒಟ್ಟು ೭ ಅಧ್ಯಾಯಗಳನ್ನು ಒಳಗೊಂಡಿದೆ. ಪ್ರಸ್ತಾವನೆ, ಗಡಿವಿವಾದದ ಹಿನ್ನಲೆ, ಮೈಸೂರು ಮತ್ತು ಮಹಾರಾಷ್ಟ್ರದ ನಡುವಿನ ಪರಸ್ಪರ ಹಕ್ಕು ಪ್ರತಿಪಾದನೆ, ಮೈಸೂರು ರಾಜ್ಯಕ್ಕೆ ಮಹಾರಾಷ್ಟ್ರ ರಾಜ್ಯ ಹಸ್ತಾಂತರಿಸಬೇಕಾದ ಹಳ್ಳಿಗಳ ಘೋಷಣೆ, ಮೈಸೂರು ಮತ್ತು ಕೇರಳ, ಮಹಾಜನ ಆಯೋಗದ ಶಿಫಾರಸ್ಸುಗಳು ಮುಂತಾದ ಅಧ್ಯಾಯಗಳನ್ನೊಳಗೊಂಡಿರುವ ಈ ಕೃತಿಯು ಮಹಾಜನ ವರದಿಯ ಬಗ್ಗೆ ವಸ್ತು ನಿಷ್ಟವಾದ ಮತ್ತು ಅಂಕಿ ಸಂಖ್ಯೆಗಳ ಆಧಾರ ಒದಗಿಸುತ್ತದೆ. ಕರ್ನಾಟಕದ ಗಡಿಯನ್ನು ರೂಪಿಸುವಲ್ಲಿ ಈ ಕೃತಿಯು ಒಂದು ಆಕರ ಗ್ರಂಥವಾಗಿದೆ.

ಅನೇಕರು ಮಹಾಜನ ವರದಿಯೆಂದು ಹೇಳುತ್ತಾರೆಯೇ ಹೊರತು ಅದರ ನೇರಪರಿಚಯ ಇರುವುದೇ ಇಲ್ಲ. ಕನ್ನಡದ ಹೋರಾಟದ ಸಂದರ್ಭದಲ್ಲಿ ಗಡಿ ಮತ್ತು ನುಡಿಯ ಬಗ್ಗೆ ಒಂದು ಯಥೋಚಿತವಾದ ತಿಳುವಳಿಕೆಯನ್ನು ಈ ಕೃತಿ ನೀಡುತ್ತದೆ. ಆದ್ದರಿಂದಲೇ ಈ ಕೃತಿ ಕನ್ನಡ ಜಾಗೃತಿ ಮಾಲೆಯ ಒಳ್ಳೆಯ ಪ್ರಕಟನೆಯೆನಿಸಿದೆ.

**೧೪. ಕರ್ನಾಟಕದ ಹಿಂದುಸ್ತಾನಿ ಸಂಗೀತಗಾರರು:** ಸದಾನಂದ ಕನವಳ್ಳಿ

ಭಾರತೀಯ ಸಂಗೀತ ಪರಂಪರೆಗೆ ಕನ್ನಡದ ಸಂಗೀತಗಾರರು ತಮ್ಮದೇ ಆದ ಕಾಣಿಕೆಯನ್ನು ನೀಡಿದ್ದಾರೆ. ಕನ್ನಡ ನಾಡಿನ ಹಿಂದುಸ್ತಾನಿ ಸಂಗೀತಗಾರರನ್ನು ನಾಡಿನ ಜನತೆಗೆ ಪರಿಚಯಿಸುವುದು ಕೃತಿಯ ಮುಖ್ಯ ಉದ್ದೇಶ. ವಿಶ್ವ ಭಾರತೀಯ ವೀಣೆಗೆ ಕನ್ನಡ ನಾಡು ತನ್ನ ಸತ್ವಯುತ ಸೇವೆಯನ್ನು ನೀಡಿ ಅದರೊಂದಿಗೆ ತನ್ನ ಶೃತಿಯನ್ನು ಸೇರಿಸಿದೆ. ಅಂತಹ ಸಂಗೀತಗಾರರ ಪರಿಚಯವನ್ನು ಪ್ರಸ್ತುತ ಕೃತಿಯಲ್ಲಿ ಕಾಣುತ್ತೇವೆ.

ಪ್ರಸ್ತುತ ಗ್ರಂಥವು ೨ ಭಾಗಗಳಲ್ಲಿ ವಿಂಗಡನೆಗೊಂಡಿದೆ. ಆರಂಭಿಕ ಭಾಗದಲ್ಲಿ ಆಧುನಿಕ ಸಂಗೀತ ಸಾಧಕರಾದ ; ಸವಾಯಿ ಗಂಧರ್ವ, ಮಲ್ಲಿಕಾರ್ಜುನ ಮನ್ಸೂರ, ಗಂಗೂಬಾಯಿ ಹಾನಗಲ್, ಪುಟ್ಟರಾಜ ಗವಾಯಿ, ಬಸವರಾಜ ರಾಜಗುರು, ಭೀಮಶೇನ ಜೋಶಿ, ಕುಮಾರ ಗಂಧರ್ವ, ಬಾಲೆಖಾನ್, ಬಿಂದು ಮಾಧವ ಪಾಠಕ ಮುಂತಾದವರ ಸಂಗೀತದ ಬದುಕನ್ನು ಒಳಗೊಂಡಿದೆ. ೨ನೆಯ ಭಾಗದಲ್ಲಿ ಪ್ರಾಚೀನ ಸಂಗೀತ ಸಾಧಕರಾದ ; ಗೋಪಾಲ ನಾಯಕ, ಜಗದ್ಗುರು ಬಾದಶಹ ಮತ್ತು ಕರ್ನಾಟಕದ ಇನ್ನುಳಿದ ಸಂಗೀತ ಶಾಸ್ತ್ರಜ್ಞರ ಪರಿಚಯವು ಮೂಡಿಬಂದಿದೆ.

ಒಟ್ಟು ಈ ಕೃತಿಯು ೨೪ ಜನ ವಿವಿಧ ಸಂಗೀತ ಕಲಾವಿದರ ಜೀವನ ಸಾಧನೆಯ ಪಥವನ್ನು ಪರಿಚಯಿಸಿ ಕೊಡುವ ಅಪರೂಪದ ಕೃತಿಯಾಗಿದೆ. ಕರ್ನಾಟಕ ಸಂಗೀತ ಸಾಧಕರ ಬಗೆಗೆ ಅಧ್ಯಯನ ಮಾಡುವವರಿಗೆ ಈ ಕೃತಿಯು ಸೂಕ್ತವಾದ ಆಕರ ಸಾಮಗ್ರಿಯನ್ನು ನೀಡುವಂತಿದೆ.

**೧೫. ಕನ್ನಡ ಕಟ್ಟೋಣ:** ಡಾ. ಪಾಟೀಲ ಪುಟ್ಟಪ್ಪ.

ಬೆಳಗಾವಿಯಲ್ಲಿ ೨೦೦೩ ಮಾರ್ಚ ೭,೮ ಮತ್ತು ೯ ರಂದು ನಡೆದ ಅಖಿಲ ಭಾರತ ೭೦ ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿಕೊಂಡು ನಾಡೋಜ ಪಾಟೀಲ ಪುಟ್ಟಪ್ಪ ಅವರು ಮಾಡಿದ ಅಧ್ಯಕ್ಷೀಯ ಭಾಷಣದ ಪರೀಷ್ಕೃತ ಆವೃತ್ತಿಯಿದಾಗಿದೆ. ಕನ್ನಡಪರ ಪ್ರಗತಿಪರ ವಿಚಾರಧಾರೆಗಳನ್ನು ಒಳಗೊಂಡಿರುವುದರಿಂದ ಈ ಕೃತಿಯನ್ನು 'ಕನ್ನಡ ಜಾಗೃತಿ ಪುಸ್ತಕ ಮಾಲೆ'ಯು ಪ್ರಕಟಿಸಿದೆ.

ಪ್ರಾದೇಶಿಕ ಅಸಮಾನತೆ ಅಳಿಯಲಿ, ಮಹಾಜನ ವರದಿ ಜಾರಿಗೆ ಬರಲಿ, ಹೊರನಾಡಿನಲ್ಲಿ ಕನ್ನಡ ಸಂಸ್ಕೃತಿ ಉಳಿಸಿ ಬೆಳೆಸುವ ಕಾರ್ಯ, ಕನ್ನಡ ಪುಸ್ತಕ ಪ್ರಕಟಣೆ ಮತ್ತು ಗ್ರಂಥಾಲಯಗಳ ಬೆಳವಣಿಗೆ, ಬೆಳಗಾವಿಯಲ್ಲಿ ಕನ್ನಡ ಕಟ್ಟುವ ಕೆಲಸ, ಸಮಕಾಲೀನ ಸಾಹಿತ್ಯ ಕ್ಷೇತ್ರ, ಸಾಹಿತ್ಯ ಕೃತಿಗಳಿಗೆ ಪ್ರಶಸ್ತಿ, ಕನ್ನಡವನ್ನು ಶ್ರೀಮಂತಗೊಳಿಸುವ ಬಗೆ, ಕನ್ನಡದ ಸಮಸ್ಯೆಗಳು, ಆಡಳಿತದಲ್ಲಿ ಕನ್ನಡ, ಗೋಕಾಕ ವರದಿಯ ಅನುಷ್ಠಾನ, ಬರಗೂರು ವರದಿಯ ಜಾರಿ, ಲೋಕಸೇವಾ ಆಯೋಗದಲ್ಲಿ ಕನ್ನಡ, ವೃತ್ತಿ ಶಿಕ್ಷಣದಲ್ಲಿ ಕನ್ನಡ, ಕನ್ನಡ ಸಂಘಗಳಿಗೆ ಅನುದಾನ, ಆಕಾಶವಾಣಿ-ದೂರದರ್ಶನದಲ್ಲಿ ಕನ್ನಡ, ಕನ್ನಡಿಗರಿಗೆ ಉದ್ಯೋಗ, ಬೆಳಗಾವಿಯಲ್ಲಿ ವಿಧಾನ ಮಂಡಲ ಅಧಿವೇಶನ ನಡೆಯಲಿ, ಕನ್ನಡ ಪತ್ರಿಕೋದ್ಯಮ ಮುಂತಾದ ಕನ್ನಡಪರವಾದ ಚಿಂತನೆಗಳು ಈ ಕೃತಿಯಲ್ಲಿವೆ. ನಾಡು-ನುಡಿ-ನಾಡವರ ಕುರಿತು ಒಡಮೂಡಿ ಬಂದ ಈ ಗ್ರಂಥವು ಕನ್ನಡ ಕಟ್ಟುವ ಕಾರ್ಯದಲ್ಲಿ ಸಹಾಯಕವಾಗಬಲ್ಲ ಅಮೂಲ್ಯವಾದ ಸಾಮಗ್ರಿಯನ್ನು ಒದಗಿಸುತ್ತದೆ.

**೧೬. ಕರ್ನಾಟಕ ಏಕೀಕರಣ ಹೋರಾಟ ಮತ್ತು ಮಹಿಳೆ:** ಡಾ. ರತ್ನಶೀಲಾ ಗುರಡ್ಡಿ

ಕರ್ನಾಟಕ ಏಕೀಕರಣ ಚಳುವಳಿಯಲ್ಲಿ ತಮ್ಮನ್ನು ಸಕ್ರೀಯವಾಗಿ ತೊಡಗಿಸಿಕೊಂಡ ಮಹಿಳೆಯರ ಹೋರಾಟದ ಬದುಕನ್ನು ಪರಿಚಯಿಸುವುದು ಈ ಕೃತಿಯ ಉದ್ದೇಶ. ಕನ್ನಡ ಜನತೆಗೆ ನಾಡು-ನುಡಿಯ ಬಗೆಗೆ ಅಭಿಮಾನ ಮತ್ತು ಪ್ರೀತಿಯನ್ನು ಮೂಡಿಸುವ ಉದ್ದೇಶದಿಂದ ಶ್ರೀ ಮಠವು ಈ ಕೃತಿಯನ್ನು ಪ್ರಕಾಶನಗೊಳಿಸಿದೆ.

ಪ್ರಸ್ತುತ ಕೃತಿಯಲ್ಲಿ ಭಾಷೆಯಾಧಾರಿತ ಪ್ರಾಂತರಚನೆ-ಚಾಲನೆ, ಏಕೀಕರಣ ಮತ್ತು ಮಹಿಳೆ, ಲೇಖಕಿಯರು ಮತ್ತು ಏಕೀಕರಣ ಸಾಹಿತ್ಯ, ಆಯೋಗಗಳು ಮತ್ತು ಮಹಿಳೆ, ಮಹಾಜನ ಆಯೋಗದ ವಿಳಂಬ ನೀತಿ, ಆಯೋಗಗಳು ಮತ್ತು ಮಹಿಳೆ, ಹೋರಾಡಿದ ಚೇತನಗಳು ಮುಂತಾದ ಅಧ್ಯಾಯಗಳನ್ನೊಳಗೊಂಡಿದೆ.

ಬಳ್ಳಾರಿಯ ಅಲ್ಲಂ ಸುಮಂಗಳಮ್ಮ, ಅನ್ನಪೂರ್ಣಬಾಯಿ ದೇಶಮುಖ, ಆಶಾತಾಯಿ ಪೋತದಾರ, ಉಮಾದೇವಿ ಟೋಪಣ್ಣವರ, ಗದಿಗೆವ್ವ ಕುರಹಟ್ಟಿ, ಗಂಗವ್ವ ಗುದ್ಲೆಪ್ಪ ಹಳ್ಳಿಕೇರಿ, ಕೊಡಗಿನ ಗೌರಮ್ಮ, ಜಯದೇವಿತಾಯಿ ಲಿಗಾಡೆ, ಪದ್ಮಾವತಿ ಅಂಗಡಿ, ಯು.ಎಂ.ಲತಾ, ಟಿ.ಸುನಂದಮ್ಮ, ಸಿದ್ದಮ್ಮ ಬಳ್ಳಾರಿ, ಶಾಂತಾದೇವಿ ಮಾಳವಾಡ ಮುಂತಾದ ಮಹಿಳೆಯರು ಕರ್ನಾಟಕದ ಏಕೀಕರಣದಲ್ಲಿ ಪಾಲ್ಗೊಂಡು ನಾಡಕಟ್ಟುವಲ್ಲಿ ಪಟ್ಟ ಶ್ರಮವನ್ನು ಈ ಗ್ರಂಥವು ಪರಿಚಯಿಸುತ್ತದೆ. ಕರ್ನಾಟಕ ಏಕೀಕರಣಕ್ಕೆ ಮಹಿಳೆಯರು ನೀಡಿದ ಕೊಡುಗೆಯನ್ನು ಪ್ರಸ್ತುತ ಪುಸ್ತಕವು ಎತ್ತಿ ತೋರುತ್ತದೆ.

೧೭. **ನಾಥ ಸಂಪ್ರದಾಯದ ಇತಿಹಾಸ:** ಮೂಲ ಡಾ. ರಾಮಚಂದ್ರ ಚಿಂತಾಮಣಿ ಢೇರೆ. ಅನುವಾದ – ಚಂದ್ರಕಾಂತ ಪೋಕಳೆ

"ಭಾಷೆ ಸಣ್ಣದಾದರೆ, ದೇಶ ಸಣ್ಣದಾಗುತ್ತದೆ. ಹೀಗಾಗದಂತೆ ನೋಡಿಕೊಳ್ಳುವಲ್ಲಿ ಒಳನಾಡಿನವರಿಗಿಂತ ಗಡಿನಾಡಿನವರ ಹೊಣೆ ಅಧಿಕವಾಗಿರುತ್ತದೆ"ˢ ಎಂಬ ಡಾ. ಎಂ.ಎಂ.ಕಲಬುರ್ಗಿಯವರ ಹೇಳಿಕೆಯನ್ನು ಸಾಬೀತುಪಡಿಸುವಂತೆ ಪ್ರೊ.ಚಂದ್ರಕಾಂತ ಪೋಕಳೆಯವರು ಅನುವಾದಿಸಿದ್ದಾರೆ. ಮೂಲ ಮರಾಠಿ ಭಾಷೆಯಲ್ಲಿ ಈ ಕೃತಿಯನ್ನು 'ನಾಥ ಸಂಪ್ರದಾಯಾಚಾ ಇತಿಹಾಸ' ಎಂಬ ಹೆಸರಿನಲ್ಲಿ ಹೊರತಂದಿದ್ದಾರೆ. ಅದು ವಿದ್ವಾಂಸರ ವಲಯದಲ್ಲಿ ಬಹಳ ಚರ್ಚೆಗೆ ಒಳಗಾಗಿದೆ.

ಮೂಲ ಕೃತಿಯಲ್ಲಿ ಮೊದಲ ಭಾಗವು ೫ ಅಧ್ಯಾಯಗಳನ್ನು ಒಳಗೊಂಡಿದೆ. ೨ನೆಯ ಭಾಗದಲ್ಲಿ ೮ ಬಿಡಿ ಲೇಖನಗಳಿವೆ. ಕನ್ನಡ ಅನುವಾದದಲ್ಲಿ ಕೇವಲ ೫ ಅಧ್ಯಾಯಗಳನ್ನು ಉಳಿಸಿಕೊಂಡು ಉಳಿದವುಗಳನ್ನು ಕೈಬಿಡಲಾಗಿದೆ. ಮೊದಲ ಅಧ್ಯಾಯ ನಾಥ ಸಂಪ್ರದಾಯದ ; ಉಗಮ ಮತ್ತು ವಿಕಾಸವನ್ನು ಒಳಗೊಂಡಿದೆ. ಗುರು ಗೋರಖನಾಥರ ಜೀವನ ಮತ್ತು ಕಾರ್ಯ ೨ನೆಯ ಅಧ್ಯಾಯದಲ್ಲಿದೆ. ೩ನೆಯ ಅಧ್ಯಾಯದಲ್ಲಿ ಕೆಲವು ಪ್ರಾಚೀನ ನಾಥ ಸಿದ್ಧರಾದ : ಜಾಲಂಧರನಾಥ, ಕೃಷ್ಣಪಾದ, ಚೌರಂಗಿನಾಥ, ಚರ್ಪಟನಾಥ ಮುಂತಾದ ನಾಥಸಿದ್ಧರ ಪರಿಚಯವಿದೆ. ಮಹಾರಾಷ್ಟ್ರದ ನಾಥ ಸಂಪ್ರದಾಯದ ಪರಿಚಯ ೪ನೆಯ ಅಧ್ಯಾಯದಲ್ಲಿದೆ. ಕೊನೆಯ ಅಧ್ಯಾಯದಲ್ಲಿ ನಾಥ ಸಂಪ್ರದಾಯವು ಬೇರೆ ಧರ್ಮ ಮತ್ತು ಸಂಪ್ರದಾಯಗಳ ಮೇಲೆ ಬೀರಿದ ಪ್ರಭಾವವು ವ್ಯಕ್ತಗೊಂಡಿದೆ. ಮರಾಠಿ ಪದ್ಯ ಭಾಗಗಳನ್ನು ಬಳಸಿಕೊಂಡು ಅನುವಾದಕರು ಕೃತಿಯನ್ನು ಅನುವಾದಿಸಿದ್ದಾರೆ.

ನಾಥಸಂಪ್ರದಾಯದ ಇತಿಹಾಸವನ್ನು ತಿಳಿದುಕೊಂಡು ಅಧ್ಯಯನಕ್ಕೆ ತೊಡಗುವವರಿಗೆ ಇದು ಮಹತ್ವದ ಆಕರ ಗ್ರಂಥವಾಗಿದೆ. ಚಿಂಚಣಿ ಮಠ ಪ್ರಕಟಿಸಿರುವ

ಮೊದಲ ಅನುವಾದ ಕೃತಿ ಮತ್ತು ಶೈವ ಶಾಖೆಯೊಂದರ ಮಹತ್ವದ ಅಧ್ಯಯನ ಕೃತಿ ಇದಾಗಿದೆ.

**೧೮. ಬೆಳಗಾವಿ ಜಿಲ್ಲೆಯ ಸಾಹಿತ್ಯ ದರ್ಶನ:** ಸಂ. ಡಾ.ಪಿ.ಜಿ.ಕೆಂಪಣ್ಣವರ

"ವಿಶೇಷವಾಗಿ ಬೆಳಗಾವಿ ಜಿಲ್ಲೆಯು ಸಾಹಿತ್ಯಕ್ಕೆ ಅಪರೂಪದ ಕೊಡುಗೆ ಕೊಟ್ಟಿದೆ. ಸಾಹಿತಿಗಳ ಸಾಹಿತ್ಯದ ಪರಿಚಯ ನಾಡಿನವರಿಗೆಲ್ಲ ಇರಬೇಕೆಂಬ ಸದುದ್ದೇಶದಿಂದ"[೧೦] ಶ್ರೀ ಮಠವು ಈ ಕೃತಿಯನ್ನು ಪ್ರಕಟಿಸಿದೆ. ಕೃತಿಯಲ್ಲಿ ಒಟ್ಟು ೧೦ ಅಧ್ಯಾಯಗಳಿವೆ. ಪ್ರತಿಯೊಂದು ಅಧ್ಯಾಯದಲ್ಲಿ ಒಂದೊಂದು ತಾಲೂಕಿನ ಸಾಹಿತಿಗಳು ಮತ್ತು ಸಾಹಿತ್ಯದ ಬಗ್ಗೆ ಮಾಹಿತಿ ಮೂಡಿಬಂದಿದೆ.

ಹಿರಿಯ ಸಾಹಿತಿಗಳ ಬದುಕು ಬರಹದ ಮಾಹಿತಿಯೊಂದಿಗೆ ಆಧುನಿಕ ಹಾಗೂ ಉದಯೋನ್ಮುಖ ಸಾಹಿತಿಗಳ ಕಿರುಪರಿಚಯವನ್ನು ಈ ಕೃತಿಯು ಒದಗಿಸುತ್ತದೆ. ಲೇಖಕರಾದ ಡಾ.ಪಿ.ಜಿ.ಕೆಂಪಣ್ಣವರ, ಪ್ರೊ. ಎಲ್.ವ್ಹಿ.ಪಾಟೀಲ, ಡಾ. ವ್ಹಿ.ಎಸ್.ಮಾಳಿ, ಡಾ.ಸಿ.ಕೆ.ನಾವಲಗಿ, ಶ್ರೀ ಜಯಪ್ರಕಾಶ ಅಬ್ಬಿಗೇರಿ ಮುಂತಾದವರು ಒಂದೊಂದು ತಾಲೂಕಿನ ಸಮಸ್ತ ಸಾಹಿತಿಗಳ ಕೃತಿಗಳನ್ನು ದಾಖಲಿಸುವಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡಿದ್ದಾರೆ. ಬೆಳಗಾವಿ ಜಿಲ್ಲೆಯ ಹಳೆ ಹೊಸ ತಲೆಮಾರಿನ ಎಲ್ಲ ಬರಹಗಾರರನ್ನು ಇಲ್ಲಿ ಒಂದೆಡೆ ಕಲೆಹಾಕಲಾಗಿದೆ. ಒಂದು ಪ್ರದೇಶದ ಸಾಹಿತ್ಯ ಅಧ್ಯಯನ ಕೈಗೊಳ್ಳುವವರಿಗೆ ಇದೊಂದು ಆಕರ ಗ್ರಂಥವಾಗಬಲ್ಲದು.

ಒಟ್ಟು ಬೆಳಗಾವಿ ಜಿಲ್ಲೆಯ ಸಮಗ್ರ ಸಾಹಿತ್ಯಿಕ ಮಾಹಿತಿಯನ್ನು ಈ ಕೃತಿಯಲ್ಲಿ ಕಾಣುತ್ತೇವೆ. ಈ ದೃಷ್ಟಿಯಿಂದ ಇದೊಂದು ಮಾಹಿತಿ ಕೋಶವಾಗಿ ಒಳ್ಳೆಯ ತಿಳುವಳಿಕೆಯನ್ನು ನೀಡುತ್ತದೆ.

**೧೯. ನಮ್ಮ ನಾಡು, ನುಡಿ ಮತ್ತು ಗಡಿ:** ಎಸ್.ವ್ಹಿ. ಪಾಟೀಲ

"ನಾಡು, ನುಡಿ, ಗಡಿಗಳ ವಿಚಾರದಲ್ಲಿ ಭಾವನಾಪರವಶತೆ, ಅಭಿಮಾನಪರವಶತೆಗಳಿಗಿಂತ, ಸಮಸ್ಯೆಗಳ ಗಾಢವಾದ ಅರಿವು ಪಡೆಯಬೇಕಾದ ತುರ್ತು ಹೆಚ್ಚುತ್ತಿರುವ ಇಂದಿನ ಸಂದರ್ಭಕ್ಕೆ ಪ್ರಸ್ತುತ ಕೃತಿ ಬಹುಮೌಲ್ಯ ಆಕರ ಗ್ರಂಥವಾಗಿದೆ"[೧೧] ಇಂಥ ಮೌಲ್ಯಯುತ ಕೃತಿಯನ್ನು ಕನ್ನಡಿಗರಿಗೆ ನೀಡುವ ಸದುದ್ದೇಶದಿಂದ ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ 'ನಮ್ಮ ನಾಡು, ನುಡಿ ಮತ್ತು ಗಡಿ'ಯನ್ನು ಪ್ರಕಾಶನಗೊಳಿಸಿದೆ.

ಕನ್ನಡ ನಾಡಿನಲ್ಲಿ ಜನಿಸಿದವರೆಲ್ಲರೂ ಕನ್ನಡ ನಾಡು-ನುಡಿ ಮತ್ತು ಗಡಿ ಕುರಿತು ಕಾಳಜಿವಹಿಸಬೇಕು. ಮೊದಲಿನ ವಿಶಾಲ ಕರ್ನಾಟಕವು ಈಗಿರುವ ಕರ್ನಾಟಕದ ಮೂರು ಪಟ್ಟು ವಿಸ್ತಾರವಾಗಿತ್ತು. ಇದನ್ನೆಲ್ಲ ನಾವು ಕಳೆದುಕೊಂಡಿದ್ದೇವೆ. ಈಗಿರುವ ಕರ್ನಾಟಕವನ್ನು ಉಳಿಸಿಕೊಳ್ಳುವುದೇ ನಮ್ಮೆಲ್ಲರ ಆದ್ಯ ಕರ್ತವ್ಯವಾಗಿದೆ.

ಇದಕ್ಕೆ ಪ್ರೇರಕವಾಗಿ ಈ ಗ್ರಂಥವನ್ನು ಪ್ರಕಾಶಿಸುತ್ತೇವೆಂಬುದು ಪ್ರಕಾಶಕರ ಅಭಿಪ್ರಾಯವಾಗಿದೆ.

ಈ ಕೃತಿಯು ಒಟ್ಟು ೯ ಅಧ್ಯಾಯಗಳನ್ನು ಹೊಂದಿದೆ. ಕರ್ನಾಟಕ ಏಕೀಕರಣ, ಮಹಾರಾಷ್ಟ್ರ–ಕರ್ನಾಟಕ ಗಡಿ ವಿವಾದ, ಮಹಾಜನ ಆಯೋಗದ ವರದಿ ಪರಿಶೀಲನೆ, ವರದಿಯ ಬಗೆಗಿನ ಪ್ರತಿಕ್ರಿಯೆಗಳು, ಭಾಷಾ ಅಲ್ಪಸಂಖ್ಯಾತರ ಸಮಸ್ಯೆಗಳು, ವಿವಾದ ಇತ್ಯರ್ಥಕ್ಕೆ ನ್ಯಾಯಾಂಗ ಮೊರೆ, ಕಾಸರಗೋಡು ಮುಂತಾದ ನಾಡು–ನುಡಿ ಗಡಿಪರ ವಿಷಯಗಳು ವಿವರ ಪೂರ್ಣವಾಗಿ ಮೂಡಿಬಂದಿವೆ. ಅನುಬಂಧದಲ್ಲಿಯ ಕರ್ನಾಟಕದ ನಿಲುವು ಸಮರ್ಥಿಸಿದ ಗಣ್ಯರ ಪಟ್ಟಿ, ಬೆಳಗಾವಿ ತಾಲೂಕಿನ ನಕ್ಷೆ, ಭಾರತದ ಸಂವಿಧಾನದ ಅವತರಣಿಕೆಗಳು, ಕಾಸರಗೋಡು ತಾಲೂಕಿನ ನಕ್ಷೆ ಮುಂತಾದ ವಿಷಯಗಳು ಕೃತಿಯಲ್ಲಿಯ ವಿವರಗಳನ್ನು ಪ್ರಮಾಣ ಪೂರ್ವಕವಾಗಿ ತಿಳಿದುಕೊಳ್ಳಲು ಪೂರಕವಾಗಿವೆ. ನಕ್ಷೆಗಳು ನಮ್ಮ ಗಡಿಯ ಸ್ಪಷ್ಟ ಚಿತ್ರಣವನ್ನು ಕಣ್ಮುಂದೆ ತಂದು ಕೊಡುವಲ್ಲಿ ಸಹಾಯಕವಾಗಿವೆ.

ಒಟ್ಟಿನಲ್ಲಿ ಈ ಗ್ರಂಥದ ಬೆನ್ನುಡಿಯಲ್ಲಿ ಹೇಳಿರುವ ಹಾಗೆ ಇಂದಿನ ಸಂದರ್ಭಕ್ಕೆ ಪ್ರಸ್ತುತ ಕೃತಿ ಬಹುಮೌಲ್ಯಯುತವಾದ ಆಕರ ಗ್ರಂಥವಾಗಿದೆ. ಈ ಕೃತಿಗೆ ಹಾರೂಗೇರಿಯ ಆಜೂರೆ ಪ್ರತಿಷ್ಠಾನವು ಕೊಡಮಾಡುವ 'ಆಜೂರೆ ಪ್ರಶಸ್ತಿ' ದೊರೆತಿದೆ.

**೨೦. ಕನ್ನಡದ ಕೂಲಿ ರಾಮು ಜಾಧವ:** ವಿಜಯಲಕ್ಷ್ಮಿ ಭೋಸಲೆ

ಮರಾಠಿ ಪರಿಸರದಲ್ಲಿ ಹುಟ್ಟಿದ್ದರೂ ಕನ್ನಡದ ಕೆಲಸಕ್ಕೆ ಸದಾಕಾಲ ಟೊಂಕ ಕಟ್ಟಿ ನಿಂತು ನಾಡು–ನುಡಿ ಕೈಂಕರ್ಯಗೈದ ದಿಟ್ಟ ವ್ಯಕ್ತಿ ರಾಮಜಾಧವ. ಕನ್ನಡ ಅಧ್ಯಯನದೊಂದಿಗೆ ಇಲ್ಲಿಯ ಸಂಸ್ಕೃತಿಯನ್ನು ಉಸಿರಾಗಿಸಿಕೊಂಡು ಕನ್ನಡದ ಬಗೆಗೆ ಅಪಾರವಾದ ಪ್ರೀತಿಯನ್ನು ಬೆಳೆಸಿಕೊಂಡ ಅಪ್ಪಟ ಕನ್ನಡಿಗ. ಹೆಸರು ಮರಾಠಿಯಾದರೂ ಯಾವ ಕನ್ನಡಿಗನಿಗೂ ಕಡಿಮೆ ಇಲ್ಲದ ರೀತಿಯಲ್ಲಿ ಕನ್ನಡದ ನಿಷ್ಠೆಯನ್ನು ರಾಮಜಾಧವ ಹೊಂದಿದ್ದರು. ಅವರ ಕನ್ನಡಪರ ಹೋರಾಟ ಮತ್ತು ಕಾರ್ಯವನ್ನು ನಾಡಿನ ಜನತೆಗೆ ಪರಿಚಯಿಸುವ ಮಹದಾಸೆಯಿಂದ ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆಯು ಈ ಕೃತಿಯನ್ನು ಪ್ರಕಾಶನಗೊಳಿಸಿದೆ.

ಕೃತಿಯು ಒಟ್ಟು ೯ ಅಧ್ಯಾಯಗಳನ್ನು ಒಳಗೊಂಡಿದೆ. ಕನ್ನಡದ ಕೂಲಿಯೋ ಕನ್ನಡದ ಕಲಿಯೋ, ಕನ್ನಡದ ಕೂಲಿಯ ಹಿನ್ನೆಲೆ, ಕನ್ನಡಕ್ಕಾಗಿ ದುಡಿ ಕನ್ನಡದಿಂದಲೇ ಪಡಿ, ಸಾಹಿತ್ಯ ರಚನೆ ಬಸವ ಚಿಂತನೆ, ಕನ್ನಡದ ಕೂಲಿಯ ಕೆಲಸಗಳು, ಕಣ್ಮರೆಯಾದ ಕನ್ನಡದ ಕೂಲಿ ಮುಂತಾದ ಅಧ್ಯಾಯಗಳಿವೆ. ಇವುಗಳಲ್ಲಿ ಕನ್ನಡ ಕೂಲಿಯ ಜೀವನ, ಕನ್ನಡಕ್ಕಾಗಿ ಹೋರಾಡಿದ ರೀತಿ, ರಚಿಸಿದ ಸಾಹಿತ್ಯ, ಕನ್ನಡಪರ ಕಾರ್ಯಗಳನ್ನು ಕುರಿತು ವಿವರ ನೀಡಲಾಗಿದೆ. ಅನುಬಂಧವು ಚಂಪಾ ಅವರ ಜಾಧವ ಅಜ್ಜ ಒಂದು

ಚಿತ್ರ, ಈಶ್ವರ ಕಮ್ಮಾರರ ರಾಮಜಾಧವ ಸ್ಮರಣೆ, ಜಾಧವರ ಕೆಲವು ಪತ್ರಗಳು, ರಾಮಜಾಧವರ ಒಂದು ಕವನವೂ ಸೇರಿಕೊಂಡು ಜಾಧವರ ವ್ಯಕ್ತಿತ್ವ ಮತ್ತು ಬರಹದ ಮಾದರಿಗಳನ್ನು ನೀಡುತ್ತದೆ.

ಪ್ರತಿ ಅಧ್ಯಾಯದ ಆರಂಭದಲ್ಲಿಯ ಕವಿತೆಯ ಸಾಲುಗಳು ಆಯಾ ಅಧ್ಯಾಯದ ಸಾರವನ್ನು ನೀಡುವಲ್ಲಿ ಸಹಾಯಕಾರಿಯಾಗಿವೆ. ಬೆನ್ನುಡಿಯಲ್ಲಿ ಡಾ. ಸರಜೂ ಕಾಟ್ಕರ ಅವರು ರಾಮಜಾಧವರ ಕುರಿತು ಬರೆದ ಕವನ ಕನ್ನಡದ ಕೂಲಿಯ ಕನ್ನಡ ಕಾರ್ಯಗಳನ್ನು ಪುನಃ ಮೆಲುಕು ಹಾಕಿಸುತ್ತದೆ.

**೨೧. ಕೃಷ್ಣಾ ತೊರೆ** (ಭುಜೇಂದ್ರ ಮಹೀಷವಾಡಿಯವರಸಮಗ್ರ ಕಾವ್ಯ) ಸಂ. ಡಾ. ಪಿ.ಜಿ.ಕೆಂಪಣ್ಣವರ

ಅನೇಕ ಶಕ್ತಿಯುತ ಮತ್ತು ಸತ್ವಯುತ ಕೃತಿಗಳನ್ನು ಕನ್ನಡಕ್ಕೆ ನೀಡಿ, ಅಪ್ಪಟ ಪ್ರತಿಭೆಯಿಂದ ಮೆರೆದ ಕವಿ ಭುಜೇಂದ್ರ ಮಹೀಷವಾಡಿಯವರು. ಪ್ರಾಥಮಿಕ ಶಾಲಾ ಶಿಕ್ಷಕರಾಗಿ ವೃತಿಯನ್ನು ಆರಂಭಿಸಿದ ಮಹೀಷವಾಡಿಯವರು ಕೊನೆಗೆ ವಿಶ್ವವಿದ್ಯಾಲಯಕ್ಕೆ ಕಾಲಿಟ್ಟು ಪ್ರಾಧ್ಯಾಪಕ ಹುದ್ದೆಯನ್ನು ಅಲಂಕರಿಸಿ ಸೇವೆಯನ್ನು ಸಲ್ಲಿಸಿದರು. ಮಹಾರಾಷ್ಟ್ರದ ಸಾಂಗ್ಲಿಯಲ್ಲಿ ವಿಲ್ಲಿಂಗಟನ್ ಕಾಲೇಜಿನ ಅಧ್ಯಾಪಕರಾಗಿಯು ಕಾರ್ಯಗೈದಿದ್ದಾರೆ. ಸಾಹಿತ್ಯ, ಸಂಶೋಧನೆ ಮತ್ತು ಕವಿತ್ವದಲ್ಲಿ ವಿದ್ವತ್ತನ್ನು ತೊರಿದ ಸಂಶೋಧಕ. ಸಹಜ ಕವಿಯಾದ ಭುಜೇಂದ್ರ ಮಹೀಷವಾಡಿಯವರ ಸಮಗ್ರ ಕಾವ್ಯವನ್ನು ಸಮಸ್ತ ಕನ್ನಡಿಗರಿಗೆ ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆಯು 'ಕೃಷ್ಣಾ ತೊರೆ' ಯ ಮೂಲಕ ನೀಡಿದೆ.

ಕೃಷ್ಣಾ ತೊರೆಯಲ್ಲಿ ಮಹೀಷವಾಡಿಯವರ ೫ ಪ್ರಕಟಿತ ಕವನ ಸಂಕಲನಗಳು, ೪ ಅಪ್ರಕಟಿತ ಕವನ ಸಂಕಲನಗಳು ಮತ್ತು ಬಿಡಿಗವನಗಳು ಸಂಗ್ರಹಗೊಂಡಿವೆ. 'ಮಾಯಾ ಮಂದಿರ', 'ಹಾಲುಹಣ್ಣು' ಇವು ಭಾವಗೀತೆಯ ಸಂಕಲನಗಳು. 'ಕಟ್ಟುವ ಕೈ' ನವೋದಯದ ಸುಳುಹಿನ ಕೃತಿ. 'ಹಂಸ ಮಿಥುನ' ಕಥನ ಕವನವಾಗಿದೆ. 'ಬೆರಕಿ ಮಂದಿ' ನವ್ಯ ಸಂಕಲನ. 'ಸೀತನೆ ಸುಲಿಗಾಯಿ' ಮತ್ತು 'ಬೋರಂಗಿ' ಶಿಶುಗೀತೆಗಳ ಸಂಕಲನವಾಗಿವೆ. 'ಛಾಯಾಚಂದ್ರನಾಥನ ವಚನ ಚಂದ್ರಿಕೆ' ಹೀಗೆ ಇನ್ನೂ ಹಲವಾರು ಬಗೆಯ ಕಾವ್ಯಗಳು ಪ್ರಸ್ತುತ ಕೃತಿಯಲ್ಲಿವೆ.

ಒಟ್ಟು ೨೩೭ ಕವಿತೆಗಳಿಂದ ಕೂಡಿದ 'ಕೃಷ್ಣಾತೊರೆ' ನಿಜಕ್ಕೂ ಕೃಷ್ಣಾ ನದಿಯ ಹರವು ಮತ್ತು ವೇಗವನ್ನು ಪರಿಚಯಿಸುವ ಹಾಗೆ ಒಬ್ಬ ಕವಿಯ ಸಮಗ್ರ ಕವಿತೆಗಳನ್ನು ಹೊಂದಿದೆ. ಕವಿಗಳ ಕಾವ್ಯದ ಸೆಲೆ ಕೃಷ್ಣಾ ನದಿಯೇ ಆಗಿದ್ದು, ಆ ಕಾರಣಕ್ಕೆ ಕೃತಿಗೆ 'ಕೃಷ್ಣಾತೊರೆ' ಎಂದು ನಾಮಕರಣ ಮಾಡಿದ್ದು ಔಚಿತ್ಯಪೂರ್ಣವಾಗಿದೆ. ಅಧ್ಯಯನಶೀಲರಿಗೆ ಸಮಗ್ರ ಕಾವ್ಯವನ್ನು ಒಂದೆಡೆಗೆ ನೀಡುವ ಕೃತಿ ಒಂದು ಆಕರ ಗ್ರಂಥವಾಗಿದೆ.

೨೨. ಇಂಚರ (ಎಸ್.ಡಿ.ಇಂಚಲರ ಸಮಗ್ರ ಕಾವ್ಯ): ಸಂ. ಬಿ.ಎಸ್. ಗವಿಮಠ

ಎಸ್.ಡಿ.ಇಂಚಲ ಅವರು ನಾಡತುಂಬ ಸಂಚರಿಸಿ ಕನ್ನಡನಾಡು-ನುಡಿ ಪರಂಪರೆಯನ್ನು ಕನ್ನಡಿಗರಿಗೆ ಪರಿಚಯಿಸುವುದರೊಂದಿಗೆ ಕನ್ನಡಿಗರಲ್ಲಿ ಭಾಷಾಭಿಮಾನ ತುಂಬಿದವರು. ನಾಡಿನ ಶ್ರೇಷ್ಠ ಕವಿಗಳಲ್ಲೊಬ್ಬರಾದ ಇಂಚಲರ ಸಮಗ್ರ ಪ್ರಕಟಿತ ಮತ್ತು ಅಪ್ರಕಟಿತ ಕವಿತೆಗಳನ್ನು ಒಂದೆಡೆ ನೀಡುವುದರ ಮೂಲಕ ನಾಡು-ನುಡಿಯ ಚಿಂತನೆಗಳನ್ನು ಕನ್ನಡಿಗರಿಗೆ ಕೊಡಬೇಕೆಂಬ ಸದುದ್ದೇಶದಿಂದ ಶ್ರೀ ಮಠವು ತಮ್ಮ ಪ್ರಕಾಶನದ ಮೂಲಕ 'ಇಂಚರ'ವನ್ನು ಹೊರತಂದಿದೆ.

ಇಂಚರವು ಒಟ್ಟು ೮ ಭಾಗಗಳನ್ನು ಹೊಂದಿದೆ. ಮೊದಲ ಭಾಗ 'ತರಂಗಿಣಿ'ಯಲ್ಲಿ ೨೫ ಕವಿತೆಗಳಿವೆ. ೨ನೆಯ ಭಾಗ 'ಸ್ನೇಹ ಸೌರಭದ'ಲ್ಲಿ ೩೪ ಕವಿತೆಗಳು ಸೇರಿವೆ. ೩ನೆಯ ಭಾಗ 'ಕಿತ್ತೂರು ಕ್ರಾಂತಿ'ಯಲ್ಲಿ ವೀರರಾಣಿ ಕಿತ್ತೂರು ಚೆನ್ನಮ್ಮಳ ಸಾಹಸದ ಕಥೆಯು ಲಾವಣಿಯ ರೂಪದಲ್ಲಿ ಮೂಡಿ ಬಂದಿದೆ. ೪ನೆಯ ಭಾಗ 'ಡಿಂಡಿಮ'ದಲ್ಲಿ ನಾಡಿನ ನವೋದಯತೆಯನ್ನು ಬಿಂಬಿಸುವ ೩೬ ಕವಿತೆಗಳಿವೆ. ೫ನೆಯ ಭಾಗ 'ಬಣ್ಣದ ಚೆಂಡಿ'ನಲ್ಲಿ ೯ ಶಿಶುಗೀತೆಗಳಿವೆ. ೬ನೆಯ ಭಾಗವಾದ 'ಮಹಾಂತ ಮಹಿಮೆ'ಯು ಮೂರು ಕವಿತೆಗಳನ್ನು ಒಳಗೊಂಡಿದೆ. ೭ನೆಯ ಭಾಗ 'ಭಾವಶ್ರೀ' ೨೩ ರಾಷ್ಟ್ರಭಕ್ತಿಯ ಗೀತೆಗಳನ್ನು ಹೊಂದಿದೆ. ಕೊನೆಯ ಬಿಡಿಗವನಗಳು ವ್ಯಕ್ತಿ ಚಿತ್ರಣವನ್ನು ನೀಡುವ ೧೫ ಕವಿತೆಗಳನ್ನು ಒಳಗೊಂಡಿದೆ.

ಹೀಗೆ ಇಂಚರವು ಒಟ್ಟು ೧೪೬ ಕವಿತೆಗಳನ್ನು ಒಳಗೊಂಡ ಕೃತಿಯಾಗಿದೆ. ಪ್ರಸ್ತುತ ಕೃತಿಗೆ ಕವಿ ಮತ್ತು ಕಾವ್ಯದ ಬಗ್ಗೆ ಅಗತ್ಯವಾದ ಪ್ರಸ್ತಾವನೆ ಇಲ್ಲದಿರುವ ಕೊರತೆಯೊಂದನ್ನು ಬಿಟ್ಟರೆ ಸಮಗ್ರ ಕಾವ್ಯವಾಗಿ ಗಮನ ಸೆಳೆಯುತ್ತದೆ.

**೨೩. ಜ್ಞಾನ ಒಂದು ಇದ್ದ ಮ್ಯಾಲೆ ಮಾನಕೇನ ಕಡ್ಮಿ ಇಲ್ಲ** (ಶಿರಗೂರು ಕಲ್ಮೇಶನ ತತ್ವಪದಗಳು): **ಸಂಕಲನ: ಗುರುಪಾದ ವಾಳಕಿ, ಸಂ.ಡಾ.ಪಿ.ಜಿ.ಕೆಂಪಣ್ಣವರ**

ರಾಯಬಾಗ ತಾಲೂಕಿನ ಶಿರಗೂರಿನ ಕಲ್ಮೇಶ್ವರರು ಬಾಲ್ಯದಿಂದಲೂ ಅಧ್ಯಾತ್ಮದ ಒಲವನ್ನು ಗಳಿಸಿಕೊಂಡವರು. ಬಸವಣ್ಣನವರ ಹಾಗೆ ಪೂಜೆಗಿಂತ ಕಾಯಕಕ್ಕೆ ಹೆಚ್ಚು ಬೆಲೆ ನೀಡಿದ ದೈವಸ್ವರೂಪಿ. ಜಾನಪದದ ವಿವಿಧ ಪ್ರಕಾರದ ಗೀತೆಗಳನ್ನು ರಚಿಸಿ ಜನರಿಗೆ ಜೀವನತತ್ವಗಳನ್ನು ಮುಟ್ಟಿಸಿದ ಅನುಭಾವಿ ಜಾನಪದ ಕವಿ. ಇಂತಹ ತತ್ವಪದಕಾರಣ ತತ್ವಪದಗಳನ್ನು ಜನತೆಗೆ ತಲುಪಿಸಿ ಸನ್ಮಾರ್ಗದತ್ತ ಕ್ರಮಿಸಲು ಪ್ರೇರೇಪಿಸುವ ದೃಷ್ಟಿಯಿಂದ ಶ್ರೀ ಮಠವು ಈ ಕೃತಿಯನ್ನು ಲೋಕಾರ್ಪಣೆ ಮಾಡಿದೆ.

ಕೃತಿ ಒಟ್ಟು ೨೬ ಕವಿತೆಗಳನ್ನು ಒಳಗೊಂಡಿದೆ. 'ಸದ್ಗುರುವಿಗೆ ಶರಣು' ಎಂಬ ಕವಿತೆಯೊಂದಿಗೆ ಕೃತಿ ಆರಂಭವಾಗುತ್ತದೆ. ಗಣಪತಿ, ಶಾರದೆಯ ಕುರಿತು ಸ್ಮರಣೆಯ ಗೀತೆಗಳು, ಗುರುಕೃಪೆಯನ್ನು ತಿಳಿಸುವ ಗೀತೆ, 'ರೊಕ್ಕದ ಮ್ಯಾಗ ಚಿತ್ತ ಹೋಗಿ' ಎಂಬ

ಹಣ ವ್ಯಾಮೋಹದ ಗೀತೆ. 'ಅಂಗ ಮಸೀದ ಮೇ ಆತ್ಮ ಫೀರ ಹೈ' ಎಂಬ ಉರ್ದು ಮಿಶ್ರಿತ ಕವಿತೆ, 'ಅಜ್ಞಾನಿಗೆ ಅವಘಡ ಐತಿ' ಎಂಬ ಸೂಚನೆಯ ಕವಿತೆ ಹೀಗೆ ಇನ್ನೂ ಮುಂತಾದ ತಾತ್ವಿಕತೆಯ ಅಂಶಗಳನ್ನೊಳಗೊಂಡಿರುವ ಕವಿತೆಗಳು ಕೃತಿಯಲ್ಲಿ ಸೇರಿಕೊಂಡಿವೆ. 'ಮಂಗಲ ಗೀತೆ'ಯೊಂದಿಗೆ ಸಂಕಲನ ಮುಕ್ತಾಯಗೊಳ್ಳುತ್ತದೆ.

ಶರೀಫರ ಹಾಗೆ ಗೀತೆಗಳ ಮೂಲಕ ತತ್ವಗಳನ್ನು ಜನರಿಗೆ ತಲುಪಿಸುವಲ್ಲಿ ಈ ಕೃತಿಯ ತತ್ವಪದಗಳು ಸಾರ್ಥಕಗೊಂಡಿವೆ. ಮೌಖಿಕವಾಗಿ ಉಳಿದು ಬಂದು ಅವಸಾನದ ಅಂಚಿನಲ್ಲಿರುವ ಈ ಗೀತೆಗಳನ್ನು ಒಂದೆಡೆ ಸಂಗ್ರಹಿಸಿ ನೀಡಿರುವುದು ಸ್ತುತ್ಯಾರ್ಹವಾಗಿದೆ. ಜೀವನ ತತ್ವಗಳನ್ನು ತಿಳಿಸುವಲ್ಲಿ ಈ ಕೃತಿ ಯಶಸ್ವಿಯಾಗಿದೆ. ಈ ಕೃತಿಯಿಂದ ಕನ್ನಡ ನಾಡಿನ ಅನುಭಾವಿಯೊಬ್ಬನ ತತ್ವಪದಗಳ ಬಗ್ಗೆ ಮೊದಲಸಲ ನಮಗೆ ತಿಳುವಳಿಕೆ ಮೂಡುತ್ತದೆ.

ಒಟ್ಟಿನಲ್ಲಿ "ನಾಡು-ನುಡಿಯ ದೃಷ್ಟಿಯಿಂದ ಶ್ರೀಮಠದ ಪ್ರಕಾಶನದಿಂದ ಹೊರಬಂದ ಕೃತಿಗಳು ತುಂಬ ಔಚಿತ್ಯಪೂರ್ಣವಾಗಿವೆ. ಇಂಥ ಸಮಾಜ ಸುಧಾರಣೆ ಮೌಲಿಕ ಕಾರ್ಯಗಳಿಂದ ಮಠದ ಹಿರಿಮೆಗೆ ಗರಿ ಮೂಡಿದೆ".[೧೨] ಗಡಿಭಾಗದ ಚಿಂಚಣಿ ನಾಡಿನ ತುಂಬ ಪ್ರಸಿದ್ಧಿ ಹೊಂದಿ ಕರ್ನಾಟಕದ ಭೂಪಟದಲ್ಲಿ ಒಂದು ವಿಶೇಷವಾದ ಸ್ಥಾನವನ್ನು ಪಡೆದುಕೊಂಡಿದೆ. "ಅಲ್ಲಮಪ್ರಭು ಜನಕಲ್ಯಾಣಸಂಸ್ಥೆ ಕನ್ನಡಜಾಗೃತಿ ಪುಸ್ತಕಮಾಲೆ ಗಡಿನಾಡಿನಲ್ಲಿ ಪುಸ್ತಕ ಪ್ರಸಾರ ಮಾಡುತ್ತಿರುವುದು ಹೆಮ್ಮೆ ಅಭಿಮಾನವನ್ನುಂಟು ಮಾಡುವಂತಹುದು. ಪುಸ್ತಕಗಳ ಮೂಲಕ ಮಠ ಕರ್ನಾಟಕದ ತುಂಬ ಬೆಳಗುತ್ತಲಿದೆ. ಈ ಪುಸ್ತಕಗಳ ಪ್ರಕಟನೆಯ ಹಿಂದೆ ಜನಮನಸ್ಸನ್ನು ಕಟ್ಟುವ ಸಂಕಲ್ಪವೂ ಇದೆ"[೧೩] ಇಂಥ ಸಂಕಲ್ಪವನ್ನು ನೆರವೇರಿಸುತ್ತಿರುವ ಶ್ರೀ ಮಠದ ಕನ್ನಡ ಪರ ಕಾರ್ಯಗಳು ಅನುಕರಣೀಯವಾಗಿವೆ. "ಕನ್ನಡ ಮತ್ತು ಕರ್ನಾಟಕದ ಇತಿಹಾಸದಲ್ಲಿ ದಾಖಲೆಯಾಗುವ ಅನೇಕ ಮಹತ್ವದ ವಿಷಯಗಳು ಕನ್ನಡಜಾಗೃತಿ ಮಾಲೆಯ ಕೃತಿಗಳಲ್ಲಿ ಬರುತ್ತಿರುವುದು ತುಂಬ ಸಂತೋಷದ ವಿಷಯ"[೧೪] ಎಂಬುದನ್ನು ಅಲ್ಲಗಳೆಯುವಂತಿಲ್ಲ.

ಈ ಮಾಲೆಯ ಎಲ್ಲ ಕೃತಿಗಳು ಕರ್ನಾಟಕದ ಸಂಸ್ಕೃತಿ, ರಾಜಕೀಯ, ಆರ್ಥಿಕ ಹಾಗೂ ಬೌದ್ಧಿಕವಾದ ಸಮೃದ್ಧಿಯ ಬಗ್ಗೆ ಅಪರೂಪದ ಒಳನೋಟಗಳನ್ನು ಹೊಂದಿವೆ. ಜನಮನವನ್ನು ಮುಟ್ಟಿ ಅಲುಗಾಡಿಸಿ ಜನತೆಯಲ್ಲಿ ಕ್ರಿಯಾಶೀಲ ಜಂಗಮ ಶಕ್ತಿಯನ್ನು ತುಂಬುವಲ್ಲಿ ಇಂಥ ಪುಸ್ತಕಗಳು ಪ್ರಾಣರಕ್ಷಕ ಸಾಧನಗಳಾಗಿವೆ. ಪುಸ್ತಕ ಬಿಡುಗಡೆ ಕೇವಲ ಸಭೆ ಸಮಾರಂಭಗಳಿಗೆ ಸೀಮಿತವಾಗದೇ ಜನ್ಮ ದಿನದ ಸಂದರ್ಭ, ಜವಳದ ಸಂದರ್ಭ, ಗೃಹ ಪ್ರವೇಶದ ಸಂದರ್ಭದಲ್ಲಿಯೂ ಅಲ್ಲಮಪ್ರಭು ಜನಕಲ್ಯಾಣ

ಸಂಸ್ಥೆಯು ಪುಸ್ತಕ ಪ್ರಕಟಿಸಿ ಬಿಡುಗಡೆಗೊಳಿಸುತ್ತಿರುವುದು ಒಂದು ಹೊಸ ಪ್ರಯೋಗವಾಗಿದೆ.

ಮಠದ ಪುಸ್ತಕ ಸಂಸ್ಕೃತಿಯು ಗಡಿನಾಡು ದಾಟಿ ಹೊರನಾಡಿನಲ್ಲಿ ನಲಿದಾಡಿದೆ. ಈ ಮಾತಿಗೆ ಮರಾಠಿಯ ಕನ್ನಡ ಅನುವಾದ ' ನಾಥ ಸಂಪ್ರದಾಯದ ಇತಿಹಾಸ' ಎಂಬ ಕೃತಿ ನಿದರ್ಶನವಾಗಿದೆ.

ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆಯ ಕನ್ನಡ ಜಾಗೃತಿ ಪುಸ್ತಕ ಮಾಲೆಯ ಕೃತಿಗಳಲ್ಲಿಯ ನಾಡು-ನುಡಿ ಮತ್ತು ಗಡಿಪರವಾದ ಚಿಂತನೆಗಳನ್ನು ಕರ್ನಾಟಕ ಸರಕಾರವು ತಿಳಿದುಕೊಂಡಿದೆ. ಆದ್ದರಿಂದ ಈ ಪ್ರಕಾಶನದ ಪ್ರಕಟಣೆಗಳಾದ: ಆಧುನಿಕ ಕರ್ನಾಟಕದ ಆತಂಕಗಳು, ನಮ್ಮ ನಾಡು-ನುಡಿ ಮತ್ತು ಗಡಿ, ಕರ್ನಾಟಕದ ಏಕೀಕರಣ ಮತ್ತು ಮಹಿಳೆ, ಕನ್ನಡತನ ಮತ್ತು ಭಾರತೀಯತೆ, ಮಹಾಜನ ವರದಿ ಅವಲೋಕನ ಗ್ರಂಥಗಳ ತಲಾ ೮೦ ಪ್ರತಿಗಳನ್ನು ವಿಧಾನ ಪರಿಷತ್ತಿನ ಕಾರ್ಯದರ್ಶಿಗಳು ಖರೀದಿಸಿದ್ದಾರೆ. ನಾಡು-ನುಡಿಪರ ಚಿಂತನೆಗಳನ್ನು ತಿಳಿಸಿಕೊಡಲು ಎಲ್ಲ ವಿಧಾನ ಪರಿಷತ ಸದಸ್ಯರಿಗೆ ಸರಕಾರವು ಉಚಿತವಾಗಿ ನೀಡಿದೆ. ಇದರಿಂದ ನಮಗೆ ಈ ಪ್ರಕಾಶನದ ಕೃತಿಗಳು ಒಳಗೊಂಡಿರುವ ವಿಷಯದ ಪ್ರಾಮುಖ್ಯತೆಯು ತಿಳಿದುಬರುತ್ತದೆ.

"ತಾವಿತ್ತ ಕೃತಿಗಳು ಅಮೂಲ್ಯ. ಅವುಗಳಲ್ಲಿ ಕನ್ನಡಿಗರು ಅವಶ್ಯವಾಗಿ ಅರಿಯಬೇಕಾದ ಅಂಕಿ ಅಂಶಗಳು, ನೋವು ನಲಿವಿನ ಕಥೆಗಳು, ನನಸಾಗಲೇ ಬೇಕಾದ ಕನಸುಗಳು, ನಾಡು ಹಾಗೂ ನುಡಿಯ ಬಗೆಗಿರುವ ತಮ್ಮ ನೇಹ ಪ್ರಶಂಸನೀಯ. ನುಡಿಯ ಗಂಧವನ್ನು ಮನೆಮನಕೆ ತಲುಪಿಸುವ ತಮ್ಮ ಸೇವೆ ಆರಾಧನೆ ! ತಮ್ಮ ಮಠವಿಂದು ನಾಡದೇವಿಯ ಮಂದಿರ ಕಲಾಲಯ ! ನಾಡಿಗರೆಲ್ಲಾ ಹೆಮ್ಮೆ ಪಡಬೇಕಾದ ಸಂಗತಿ"[೧೫] ಎಂದು ವಿಜಾಪುರದ ಜ್ಞಾನಯೋಗ ಆಶ್ರಮದ ಶ್ರೀ ಸಿದ್ದೇಶ್ವರ ಸ್ವಾಮಿಗಳು ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆಯ ಪ್ರಕಟಣೆಗಳನ್ನು ಮನಸಾ ಪ್ರಶಂಶಿಸಿರುವುದು ಸಂಸ್ಥೆಗೆ ಪ್ರಮಾಣ ಪತ್ರ ನೀಡಿದಂತಿದೆ.

ಗಡಿನಾಡಿನ ನಿರಭಿಮಾನಿ ಕನ್ನಡಿಗರಲ್ಲಿ ಭಾಷಾಭಿಮಾನವನ್ನು ತುಂಬಿ ಕನ್ನಡಪರವಾಗಿ ಚಿಂತಿಸಲು ಹಾಗು ದುಡಿಯಲು ಈ ಮೇಲಿನ ಎಲ್ಲ ಕೃತಿಗಳು ಸಹಾಯಕವಾಗಿವೆ. ಚಿಂಚಣಿ ಕೇಂದ್ರದಲ್ಲಿ ಅಲ್ಲಮಪ್ರಭು ಸ್ವಾಮಿಗಳು ಎಬ್ಬಿಸಿರುವ ಕನ್ನಡಪರ ಅಲೆಗಳು ಆಳವಾಗಿವೆ. ಇವು ಪ್ರತಿಯೊಬ್ಬ ಕನ್ನಡಿಗನ ಮನಕ್ಕೆ ತಟ್ಟಿ ಹೊಸ ಸಂವೇದನೆಯನ್ನು ಉಂಟುಮಾಡುವಂತಹ ಶಕ್ತಿಯನ್ನು ಪಡೆದುಕೊಂಡಿವೆ.

"ಗಡಿಭಾಗದಲ್ಲಿ ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆಯ 'ಕನ್ನಡಜಾಗೃತಿ ಪುಸ್ತಕಮಾಲೆ' ಯೋಜನೆ ಅಡಿಯಲ್ಲಿ ಹೊರಬರುತ್ತಿರುವ ಪುಸ್ತಕಗಳು ಕನ್ನಡ ಸಾಹಿತ್ಯ, ಇತಿಹಾಸ ಮಾರ್ಗದಲ್ಲಿ ಹಚ್ಚಿಡುತ್ತಿರುವ ದೀಪಗಳಾಗಿವೆ"[೧೬] ಎಂದು ಗದುಗಿನ

ಜ.ಡಾ.ಸಿದ್ದಲಿಂಗ ಮಹಾಸ್ವಾಮಿಗಳು ತಮ್ಮ ಕರಕಮಲದಲ್ಲಿ ಬೆಳೆದು ಚಿಂಚಣಿ ಮಠಕ್ಕೆ ಮೆರಗು ನೀಡಿದ ಶಿಷ್ಯರಾದ ಶ್ರೀ ಅಲ್ಲಮಪ್ರಭು ಸ್ವಾಮಿಗಳ ಕಾರ್ಯವನ್ನು ಮನದುಂಬಿ ಹೊಗಳಿದ್ದಾರೆ. ಈ ರೀತಿ ಓರ್ವ ಗುರುಗಳು ತನ್ನ ಶಿಷ್ಯನನ್ನು ಹೊಗಳುವುದಕ್ಕೆ ಆತನ ಕಾರ್ಯಕ್ಷಮತೆಯೇ ಕಾರಣ ಎಂದು ಬೇರೆ ಹೇಳಬೇಕಾಗಿಲ್ಲ.

ಸಾಮಾನ್ಯವಾಗಿ ಮಠಗಳ ಪ್ರಕಟಣೆಗಳೆಂದರೆ ಧರ್ಮ, ತತ್ವ, ಅಧ್ಯಾತ್ಮದ ಪುಸ್ತಕಗಳೆಂದು ಪ್ರಚಲಿತವಾಗಿದೆ. ಇದಕ್ಕೆ ಅಪವಾದವೆಂಬಂತೆ ಚಿಂಚಣಿ ಮಠವು ಸಾಧನ ಸೌಲಭ್ಯಗಳಿಂದ ದೂರವಿರುವ ಗ್ರಾಮೀಣ ಪ್ರದೇಶದಲ್ಲಿದ್ದುಕೊಂಡು ಗಡಿಭಾಗದ ಇಕ್ಕಟ್ಟಾದ ಪ್ರದೇಶದಲ್ಲಿ ನಾಡು-ನುಡಿ ಜಾಗೃತಿಯ ವಿಷಯವಸ್ತುವಿರುವ ಕೃತಿಗಳನ್ನು ಹೊರತರುತ್ತಿದೆ. ಇದು ಇಂದಿನ ದಿನಗಳಲ್ಲಿ ಕನ್ನಡ ಪರವಾದ ಬಹುಮುಖ್ಯವಾದ ನಾಡು-ನುಡಿ ಜಾಗೃತಿಯ ಕೆಲಸವಾಗಿದೆ.

**ಅಡಿ ಟಿಪ್ಪಣಿಗಳು:**

೧. ಸಾರಂಗ ಶ್ರೀ - ಎಂ.ಎ. ಕಲಬುರ್ಗಿ, ಪು. V
೨. ಆರನೇ ವಿಕ್ರಮಾದಿತ್ಯನ ಶಾಸನಗಳು ಒಂದು ಸಾಂಸ್ಕೃತಿಕ ಅಧ್ಯಯನ - ಜಿ.ಎಂ. ನಾಗಯ್ಯ ಪು. VIII
೩. ಕನ್ನಡ-ಕನ್ನಡಿಗ-ಕರ್ನಾಟಕ - ಎಲ್.ಎಸ್. ಶೇಷಗಿರಿರಾವ, ಪು. V
೪. ದೈನಂದಿನ ಬದುಕಿನಲ್ಲಿ ಕನ್ನಡ - ಸಂ. ಗಡಿಕನ್ನಡಿಗರ ಬಳಗದ ಸದಸ್ಯರು. ಪ್ರಕಾಶಕರ ನುಡಿ.
೫. ಕನ್ನಡತನ ಮತ್ತು ಭಾರತೀಯತೆ-ಡಾ. ಪಿ.ವ್ಹಿ. ನಾರಾಯಣ, ಪು. V
೬. ಕನ್ನಡಕಾಯಕ ಯೋಗಿ ಡಾ: ಶಿವಬಸವಸ್ವಾಮಿಗಳು-ಬಸವರಾಜ ಜಗಜಂಪಿ ಪು. V
೭. ಕನ್ನಡ ಜಗದ್ಗುರು-ಚಂದ್ರಶೇಖರ ವಸ್ತ್ರದ, ಪು. ೧
೮. ರಂಗಭೂಮಿಯ ಕನ್ನಡ ಸಂವೇಧನೆ - ರಾಮಕೃಷ್ಣಾ ಮರಾಠೆ, ಪು. V
೯. ನಾಥ ಸಂಪ್ರದಾಯದ ಇತಿಹಾಸ - ಚಂದ್ರಕಾಂತ ಪೋಕಳೆ, ಪು. ೭
೧೦. ಬೆಳಗಾವಿ ಜಿಲ್ಲೆಯ ಸಾಹಿತ್ಯ ದರ್ಶನ- ಸಂ. ಪಿ.ಜಿ. ಕೆಂಪಣ್ಣವರ, ಪು. V
೧೧. ಕನ್ನಡ ನಾಡು, ನುಡಿ ಮತ್ತು ಗಡಿ, - ಎಸ್.ವ್ಹಿ. ಪಾಟೀಲ, ಬೆನ್ನುಡಿ.
೧೨. ಮರಾಠಿ ಕನ್ನಡ ಸಂವರ್ಧನೆ. ಪುಣೆಯ ಪತ್ರ.
೧೩. ಡಾ. ಜಿ.ಎಂ. ಹೆಗಡೆಯವರ ಪತ್ರ.
೧೪. ಬೆಳಗಾವಿಯ ರುದ್ರಾಕ್ಷಿಮಠದ, ಶ್ರೀ ಸಿದ್ಧರಾಮ ಸ್ವಾಮಿಗಳ ಪತ್ರ.
೧೫. ವಿಜಾಪೂರದ ಶ್ರೀ ಸಿದ್ದೇಶ್ವರಸ್ವಾಮಿಗಳ ಪತ್ರ.
೧೬. ಗದಗದ ಡಾ. ತೋಂಟದ ಸಿದ್ಧಲಿಂಗಸ್ವಾಮಿಗಳ ಪತ್ರ.

ಅಧ್ಯಾಯ ೫

# ಗಡಿಗನ್ನಡಿಗರ ಬಳಗ – ಕನ್ನಡ ಕಾರ್ಯ

ಕನ್ನಡವನ್ನು ಕಟ್ಟುವ ಕೆಲಸವಂತೂ ಸದಾ ನಮ್ಮ ಕಣ್ಮುಂದೆ ಇರಬೇಕಾದದ್ದು. "ಕನ್ನಡ ನಾಡು ಕಟ್ಟುವದೆಂದರೆ ಬರಿ ರಾಜಕೀಯ ಭೌಗೋಳಿಕ ಸೀಮಾ ರೇಖೆಯಲ್ಲ; ಅದು ಜೀವಂತ, ಚಿಂತನಶೀಲ, ಸೃಜನಶೀಲ ಜನಪದ ಸೃಷ್ಟಿ".[೧] ಈ ರೀತಿಯಾದ ಕನ್ನಡವನ್ನು ಕಟ್ಟುವ ಕಾರ್ಯವು ಹಲವು ವರ್ಷಗಳಿಂದ ನಿರಂತರವಾಗಿ ಸಾಗಿಬಂದಿದೆ. ಒಬ್ಬ ವ್ಯಕ್ತಿಯ ಕೂಗು ನಾಡಿಗೆ ಅಥವಾ ಜನತೆಗೆ ಕೇಳದು. ಬಹುಜನರು ಕೂಡಿಕೊಂಡು ಕೂಗಿದಾಗ ನಾಡಿಗೆ ಅಥವಾ ಸರ್ಕಾರಕ್ಕೆ ಎಚ್ಚರಿಕೆಯುಂಟಾಗುತ್ತದೆ. ಇಂಥ ಉದ್ದೇಶಕ್ಕಾಗಿ ಕನ್ನಡದ ನೆಲದಲ್ಲಿ ನಾಡು-ನುಡಿಯ ರಕ್ಷಣೆಗೆ ಹಲವಾರು ಸಂಘಟನೆಗಳು ಹುಟ್ಟಿಕೊಂಡಿರುವುದು ತಿಳಿದುಬರುತ್ತದೆ.

ಸರ್ಕಾರದ ಮಟ್ಟದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಕನ್ನಡ ಪುಸ್ತಕ ಪ್ರಾಧಿಕಾರ ಮುಂತಾದ ಸಂಸ್ಥೆಗಳು ತಮ್ಮದೇ ಆದ ವಿವಿಧ ಯೋಜನೆ ಮತ್ತು ಕಾರ್ಯಕ್ರಮಗಳ ಮೂಲಕ ಕನ್ನಡನಾಡು-ನುಡಿಪರ ಕಾರ್ಯವನ್ನು ಮಾಡುತ್ತಿವೆ. ಇದರೊಂದಿಗೆ ಸ್ವತಂತ್ರ ಸಂಘ-ಸಂಸ್ಥೆಗಳೂ ಸಹ ನಾಡು-ನುಡಿಪರವಾಗಿ ಕಾರ್ಯಗೈಯ್ಯುತ್ತಿರುವುದು ಸರ್ವವಿಧಿತವಾದುದು. ಅಂಥವುಗಳಲ್ಲಿ ಹೆಸರಿಸಲೇ ಬೇಕಾದ ಸಂಸ್ಥೆಗಳೆಂದರೇ: ಬೆಂಗಳೂರಿನ-ಕನ್ನಡ ಶಕ್ತಿಕೇಂದ್ರ, ಧಾರವಾಡದ-ಉತ್ತರ ಕರ್ನಾಟಕ ಅಭಿವೃದ್ಧಿಪರ ಹೋರಾಟ ವೇದಿಕೆ. ಬೆಂಗಳೂರಿನ-ಕನ್ನಡ ಸಂಘರ್ಷ ಸಮೀತಿ, ಕರ್ನಾಟಕ ರಕ್ಷಣಾ ವೇದಿಕೆ, ಮೈಸೂರಿನ-ಕುವೆಂಪು ಕನ್ನಡ ಸಂಘ, ಡಾ. ರಾಜಕುಮಾರ ಅಭಿಮಾನಿಗಳ ಸಂಘ, ಗೆಳೆಯರ ಬಳಗ ಯಕ್ಸಂಬಾ, ಕನ್ನಡ ಬಳಗ ಚರಮೂರ್ತಿಮಠ ಚಿಕ್ಕೋಡಿ, ವಕೀಲರ ಸಂಘ ಚಿಕ್ಕೋಡಿ, ಅಕ್ಕನ ಬಳಗ ಚಿಕ್ಕೋಡಿ, ಕ.ಸಾ.ಪ. ಮತ್ತು ಚು.ಸಾ.ಪ. ತಾಲೂಕಾ ಘಟಕಗಳು ಇನ್ನೂ ಹಲವಾರು ಕನ್ನಡಪರ ಸಂಘಸಂಸ್ಥೆಗಳು ಕನ್ನಡ ಜಾಗೃತಿಗಾಗಿ ನಿರಂತರವಾಗಿ ಕಾರ್ಯೋನ್ಮುಖವಾಗಿವೆ. ನಾಡು-ನುಡಿ, ನೆಲ-ಜಲ ಪ್ರಶ್ನೆ ಬಂದಾಗ ಈ ಎಲ್ಲ ಕನ್ನಡಪರ ಸಂಘಟನೆಗಳು ಪ್ರಬಲವಾಗಿ ಹೋರಾಟಕ್ಕೆ ಇಳಿಯುತ್ತವೆ. ಕನ್ನಡಪರ ಸಭೆ-ಸಮಾರಂಭಗಳಲ್ಲಿ ಸಕ್ರೀಯವಾಗಿ ಪಾಲ್ಗೊಳ್ಳುತ್ತವೆ. ಅದ್ದೂರಿಯಾಗಿ ರಾಜ್ಯೋತ್ಸವಗಳನ್ನು ಆಚರಿಸುತ್ತವೆ. "ಕನ್ನಡದ ಸರ್ವತೋಮುಖ ಪ್ರಗತಿಗೆ ಕೈಗೊಳ್ಳಬೇಕಾದ ಕರ್ತವ್ಯಗಳ ಬಗ್ಗೆ ಕಾಲಕಾಲಕ್ಕೆ ಹಿರಿಯರು, ವಿಚಾರಶೀಲರು ಪ್ರಸ್ತಾಪಿಸುತ್ತ, ಮಾರ್ಗದರ್ಶನ ಮಾಡುತ್ತ ಅವಶ್ಯಬಿದ್ದಾಗ, ಹೋರಾಟದ ಕಣಕ್ಕಿಳಿದು ಕ್ರೀಯಾಶೀಲರಾಗಿ ಕೆಲಸ ಮಾಡುತ್ತ ಬಂದಿದ್ದಾರೆ".[೨] ಕರ್ನಾಟಕದಲ್ಲಿ ನಾಡು-ನುಡಿ ಹೋರಾಟದ ದೊಡ್ಡ ಇತಿಹಾಸವೇ ಇದೆ. ಕಾಲ-ಕಾಲಕ್ಕೆ

ನಮ್ಮಲ್ಲಿ ಹಿರಿಯರ ಮಾರ್ಗದರ್ಶದಲ್ಲಿ ಸಂಘಟನೆಗಳು ಹುಟ್ಟಿಕೊಂಡು, ನಾಡು-ನುಡಿಗೆ ಮರುಜೀವವನ್ನು ತುಂಬುವ ಕೇಂದ್ರಗಳಾಗಿ ಕಾರ್ಯೋನ್ಮುಖವಾಗಿವೆ. ಎಷ್ಟೇ ಸರ್ಕಾರಗಳು ಆಳ್ವಿಕೆ ಮಾಡಿದರೂ ಸಹ ಗಡಿಭಾಗದಲ್ಲಿ ಕನ್ನಡದ ಸ್ಥಿತಿ ಚಿಂತಾಜನಕವಾಗಿದೆ. "ಕನ್ನಡಿಗರು ಹೊಸದನ್ನು ಗಳಿಸುವುದಿರಲಿ, ಇದ್ದುದ್ದನ್ನು ಕಳೆದುಕೊಳ್ಳದ ಹಾಗಾದರೂ ನೋಡಿಕೊಳ್ಳಬೇಕಲ್ಲವೇ"?[೩] ಈ ಎಲ್ಲ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ಗಡಿಭಾಗದ ಕನ್ನಡಿಗರನ್ನು ಜಾಗೃತಗೊಳಿಸಬೇಕೆಂಬ ಮಹದಾಶೆಯಿಂದ ಚಿಂಚಣಿಯ ಅಲ್ಲಮಪ್ರಭು ಸಿದ್ಧಸಂಸ್ಥಾನಮಠದ ಅಂಗಸಂಸ್ಥೆಯಾಗಿ ಸ್ವಾಮೀಜಿಯವರ ನೇತೃತ್ವದಲ್ಲಿ ೧೯೭೭ ರಂದು ಗಡಿಕನ್ನಡಿಗರ ಬಳಗ ಸ್ಥಾಪನೆಯಾಯಿತು. ರಂ. ಶಾ. ಲೋಕಾಪೂರ ಅವರ ಅಧ್ಯಕ್ಷತೆಯಲ್ಲಿ ಗಡಿಕನ್ನಡಿಗರ ಬಳಗದ ಕಾರ್ಯಚಟುವಟಿಕೆಗಳು ೦೮.೧೧.೧೯೭೮ ರಂದು ಪ್ರಾರಂಭಗೊಂಡವು. ಈ ಸಂಸ್ಥೆಯನ್ನು ಹುಟ್ಟುಹಾಕಲು ಅಲ್ಲಮಪ್ರಭು ಸ್ವಾಮಿಗಳಿಗೆ ಗದಗಿನ ಜ. ಡಾ. ಸಿದ್ಧಲಿಂಗ ಸ್ವಾಮಿಗಳು ಹೇಳಿದ "ಗಡಿಭಾಗದ ಮಠಕ್ಕೆ ಹೊರಟಿದ್ದೀರಿ. ಈಗಾಗಲೇ ಧರ್ಮದ ಬಗೆಗೆ ಮಠಗಳು ಹಲವಾರು ಕಾರ್ಯಗಳನ್ನು ಮಾಡಿವೆ, ಮಾಡುತ್ತಿವೆ. ಆದರೆ ತಾವುಗಳು ಮಾತ್ರ ಚಿಂಚಣಿ ಮಠದ ಪೀಠಾಧಿಪತಿಗಳಾಗಿ ಗಡಿಭಾಗದಲ್ಲಿ ಕನ್ನಡವನ್ನು ಗಟ್ಟಿಗೊಳಿಸುವ ಕಾರ್ಯವನ್ನು ನಿರಂತರವಾಗಿ ಮುಂದುವರಿಸಿಕೊಂಡು ಗಡಿಯನ್ನು ರಕ್ಷಿಸುವ ಬೇಲಿಯಾಗಬೇಕು". ಎಂಬ ಆಶಯದ ಮಾತುಗಳೇ ಇಂತಹ ಒಂದು ಕನ್ನಡ ಸಂಘಟನೆಯನ್ನು ಹುಟ್ಟುಹಾಕಲು ಪ್ರೇರಣೆಯನ್ನು ಒದಗಿಸಿತೆಂಬುವುದು ಅಲ್ಲಮಪ್ರಭು ಸ್ವಾಮೀಜಿಯವರ ಅಭಿಮತ. ಜಗದ್ಗುರುಗಳ ಆಶಯದ ಮೇರೆಗೆ ಅಲ್ಲಮಪ್ರಭು ಸ್ವಾಮಿಗಳ ನೇತೃತ್ವದಲ್ಲಿ ಹುಟ್ಟಿಕೊಂಡ ಈ ಸಂಘಟನೆಯ ಯೋಜನೆಗಳನ್ನು ಈ ರೀತಿಯಾಗಿ ನೋಡೋಣ.

**ಧ್ಯೇಯೋದ್ದೇಶಗಳು:**

೧. ಎಲ್ಲರೂ ಕನ್ನಡದಲ್ಲಿ ವ್ಯವಹರಿಸುವಂತೆ ಮನವೊಲಿಸುವುದು.

೨. ಗಡಿಭಾಗದಲ್ಲಿ ಕನ್ನಡ ಭಾಷೆ, ಸಂಸ್ಕೃತಿಯ ರಕ್ಷಣೆ ಮತ್ತು ಪ್ರಸಾರ.

೩. ವೈವಿಧ್ಯಪೂರ್ಣ ಕನ್ನಡೋತ್ಸವಗಳ ಆಚರಣೆ.

೪. ಸಾಹಿತಿ-ವಿದ್ವಾಂಸರಿಂದ ನಾಡು-ನುಡಿಪರ ಭಾಷಣಗಳನ್ನು ಏರ್ಪಡಿಸುವುದು.

೫. ಪುಸ್ತಕ ಬಿಡುಗಡೆ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.

೬. ಯುವಕರಿಗೆ ಮತ್ತು ವಿದ್ಯಾರ್ಥಿಗಳಿಗೆ ಕನ್ನಡಪರ ಸ್ಪರ್ಧೆಗಳನ್ನು ನಡೆಸುವುದು.

೭. ಗಡಿಜನತೆಯಲ್ಲಿ ನುಡಿಜಾಗೃತಿಯನ್ನು ಮೂಡಿಸುವುದು.

೮. ನಾಡು-ನುಡಿಗೆ ತೊಂದರೆಯಾದಾಗ ಅದನ್ನು ಪ್ರತಿಭಟಿಸುವುದು.

೯. ಜಾತಿ-ಮತಗಳ ಭೇದವಿಲ್ಲದೇ ಕನ್ನಡತನದಿಂದ ಬದುಕುವುದು.

೧೦. ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.
೧೧. ಸರಕಾರದ ಸೌಲಭ್ಯಗಳು ಗಡಿಭಾಗಕ್ಕೆ ದಕ್ಕುವಂತೆ ಪ್ರಯತ್ನಿಸುವುದು.
೧೨. ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿದವರನ್ನು ಸನ್ಮಾನಿಸುವುದು.

**ರಾಜ್ಯೋತ್ಸವಗಳ ವಿಶೇಷ ಆಚರಣೆಗಳು:**

೧೯೯೭ ರಲ್ಲಿ ಸ್ವಾಮೀಜಿಯವರ ನೇತೃತ್ವದಲ್ಲಿ ರೂಪಿತಗೊಂಡು ಶ್ರೀ ಭರತ ಕುಂಬಾರ ಅವರ ಅಧ್ಯಕ್ಷತೆಯಲ್ಲಿ ಗಡಿಕನ್ನಡಿಗರ ಬಳಗವು ಸ್ಥಾಪನೆಗೊಂಡಿತು. ಇದು ಚಿಕ್ಕೋಡಿ ಪರಿಸರದಲ್ಲಿ ಹಲವಾರು ನಾಡು-ನುಡಿಪರವಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದೆ. ಈ ಮೂಲಕ ಚಿಂಚಣಿಯ ಗಡಿಕನ್ನಡಿಗರ ಬಳಗ ಗಡಿಭಾಗದಲ್ಲಿ ಕನ್ನಡತನವನ್ನು ನಿರಂತರವಾಗಿ ಪೋಷಿಸಿಕೊಂಡು ಬರುತ್ತಿದೆ. "ಎಲ್ಲ ಗಡಿಪ್ರದೇಶಗಳಿಗಿದು ಮಾದರಿಯಾಗಬೇಕಿದೆ. ಹತ್ತುಹಲವು ಕನ್ನಡಪರ ಚಟುವಟಿಕೆಗಳನ್ನು ನಿರ್ವಿರಾಮವಾಗಿ ನಡೆಸಿಕೊಂಡು ಬರುತ್ತಿರುವ ಸ್ವಾಮೀಜಿಯವರು ಅಪರೂಪವಾಗಿದ್ದಾರೆ".[೪] ಇನ್ನುಳಿದ ಸ್ವಾಮೀಜಿಯವರಿಗೆ ಮಾದರಿಯಾಗಿದ್ದಾರೆ.

"ಕನ್ನಡ ಜಾಗೃತಿಯೆಂದರೆ ಭಾಷಾಸಮಸ್ಯೆ, ಗಡಿಸಮಸ್ಯೆ, ಇತ್ಯಾದಿಗಳಷ್ಟೇ ಅಲ್ಲ. ಗಡಿಸಂಸ್ಕೃತಿಯ ಅಧ್ಯಯನ, ಗಡಿನಾಡ ಲೇಖಕರಿಗೆ ಪ್ರೋತ್ಸಾಹ ಇತ್ಯಾದಿ ವಿಷಯಗಳನ್ನು ಒಳಗೊಂಡಿರುವುದು".[೫] ಆ ಕಾರಣಕ್ಕಾಗಿ ಗಡಿಕನ್ನಡಿಗರ ಬಳಗವು ಭಾಷೆ, ಗಡಿಭಾಗದ ರಕ್ಷಣೆಯ ಜೊತೆಗೆ ಗಡಿನಾಡಿನ ಲೇಖಕರಿಗೆ, ಕಲಾವಿದರಿಗೆ ಪ್ರೋತ್ಸಾಹ ನೀಡುತ್ತಿದೆ. ಕನ್ನಡದ ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ ಮಹನೀಯರನ್ನು ಶ್ರೀ ಮಠಕ್ಕೆ ಬರಮಾಡಿಕೊಂಡು ಅವರ ಕಾರ್ಯವನ್ನು ಗೌರವಿಸುವ ಮಣಿಹದಲ್ಲಿ ಮುಂಚೂಣಿಯಲ್ಲಿದೆ. ೧೯೯೯ರಿಂದ ಪ್ರತಿವರ್ಷ ನವ್ಹೆಂಬರ್ ೨ ರಂದು ಗಡಿಕನ್ನಡಿಗರ ಬಳಗದ ಆಶ್ರಯದೊಂದಿಗೆ ಶ್ರೀ ಮಠದಲ್ಲಿ ಕನ್ನಡ ರಾಜ್ಯೋತ್ಸವ ಬಹಳ ವೈಭವಯುತವಾಗಿ ಆಚರಿಸಲ್ಪಡುತ್ತಿದೆ. ಇಡೀ ಊರಿಗೆ ಹೊಸತನವನ್ನು, ಸಂಭ್ರಮದ ವಾತಾವರಣ ನಿರ್ಮಿಸುವಲ್ಲಿ ಈ ಉತ್ಸವಗಳು ಪ್ರಯೋಜನಕಾರಿ ಮತ್ತು ಪರಿಣಾಮಕಾರಿಯಾಗಿವೆ. "ರಾಜ್ಯೋತ್ಸವ ಕಾರ್ಯಕ್ರಮವು ಗಡಿಭಾಗದಲ್ಲಿ ನಿಜಕ್ಕೂ ಕನ್ನಡತನವನ್ನು ಜಾಗೃತ ಗೊಳಿಸುತ್ತ ಬಂದಿರುವುದನ್ನು ಬೆಂಗಳೂರಿಗೆ ತಿಳಿಸುವಂತಿತ್ತು. ಸಣ್ಣ ಊರಿನಲ್ಲಿ ಕೈಗೊಂಡಿರುವ ಕಾರ್ಯಕ್ರಮವು ಸ್ವಾಮೀಜಿಯವರ ಚಿಂತನೆಗಳ ಕ್ರಿಯಾ ರೂಪ".[೬]

ಇದುವರೆಗೆ ಗಡಿಕನ್ನಡಿಗರ ಬಳಗವು ೯ ರಾಜ್ಯೋತ್ಸವಗಳನ್ನು ಬಹಳ ಅದ್ಧೂರಿಯಾಗಿ ಮತ್ತು ಅರ್ಥಪೂರ್ಣವಾಗಿ ಆಚರಿಸಿದೆ. ಅವುಗಳನ್ನು ಈ ತೆರನಾಗಿ ಗುರುತಿಸುತ್ತೇವೆ.

ನಾಡಿನ ಬೇರೆ ಬೇರೆ ಮೂಲೆಯ ಸಾಹಿತಿ ವಿದ್ವಾಂಸರು ಗಡಿಕನ್ನಡಿಗರ ಬಳಗದ ರಾಜ್ಯೋತ್ಸವ ಆಚರಣೆಯಲ್ಲಿ ಭಾಗಿಗಳಾಗಿದ್ದಾರೆ. ಅವರುಗಳೆಂದರೆ ಕನ್ನಡದ ಖ್ಯಾತ ಕಾದಂಬರಿಕಾರರಾದ ರಂ. ಶಾ. ಲೋಕಾಪೂರ, ಬೆಂಗಳೂರು ಕನ್ನಡ ಶಕ್ತಿಕೇಂದ್ರದ ನಿರ್ದೇಶಕರು ಹಾಗೂ ಖ್ಯಾತ ಸಂಶೋಧಕರಾದ ಡಾ. ಎಂ. ಚಿದಾನಂದ ಮೂರ್ತಿ, ಹುಬ್ಬಳ್ಳಿಯ ಮೂ.ಜ.ಗಂ. ಸ್ವಾಮಿಗಳು, ನಿಡಸೋಸಿ ಪಂಚಮ ಶ್ರೀ ಶಿವಲಿಂಗೇಶ್ವರ ಮಹಾಸ್ವಾಮಿಗಳು ಭಾಗಿಗಳಾಗಿದ್ದಾರೆ. ಖ್ಯಾತ ವಿದ್ವಾಂಸರು ವಿಮರ್ಶಕರು ಆದ ಡಾ. ಎಸ್. ವಿದ್ಯಾಶಂಕರ ಅವರು ರಾಜ್ಯೋತ್ಸವದಲ್ಲಿ ಪಾಲ್ಗೊಂಡು "ಹೈಕೋರ್ಟಿನ ಪೀಠ ಕೊಡದ ಸರ್ಕಾರ ಗಡಿಭಾಗದ ಎಷ್ಟು ಸಮಸ್ಯೆಗಳಿಗೆ ಸ್ಪಂದಿಸಲು ಸಾಧ್ಯ, ಗಡಿಭಾಗದ ನಿರ್ಲಕ್ಷದಿಂದಾಗಿ ಜನತೆ ಕಷ್ಟದಲ್ಲಿದ್ದಾರೆ. ಆರ್ಥಿಕ ಸುಭದ್ರತೆಗೆ ಹೋರಾಡುತ್ತಿರುವ ಮಠಗಳನ್ನು ನೋಡಿದರೆ ಚಿಂಚಣಿಮಠ ಕನ್ನಡಪರ ಪುಸ್ತಕಗಳನ್ನು ಪ್ರಕಟಿಸುತ್ತಿರುವುದು ಹೆಮ್ಮೆಯ ವಿಷಯ"[೭] ಎಂದು ಗಡಿಜನತೆಗೆ ಸರಕಾರದ ನಿರ್ಲಕ್ಷತೆ ಮತ್ತು ಶ್ರೀ ಮಠದ ಕನ್ನಡ ಪ್ರೀತಿಯನ್ನು ತಿಳಿಸಿದ್ದಾರೆ.

ಹಿರೇಮಠ ಸಂಸ್ಥಾನ ಬಾಲ್ಕಿಯ ಬಸವಲಿಂಗ ಪಟ್ಟದ್ದೇವರು, ಕನ್ನಡ ಹೋರಾಟಗಾರರಾದ ಡಾ. ಪಾಟೀಲ ಪುಟ್ಟಪ್ಪ ಅವರು ರಾಜ್ಯೋತ್ಸವದಲ್ಲಿ ತಮ್ಮ ಚಿಂತನೆಗಳನ್ನು ಗಡಿಭಾಗದ ಜನರಿಗೆ ತಿಳಿಸಿ ನಾಡಿನ ಬಗ್ಗೆ ಅಭಿಮಾನವನ್ನು ಮೂಡಿಸಿದ್ದಾರೆ. "ವಿವಿಧ ಇಲಾಖೆಗಳಲ್ಲಿ ಆಗುತ್ತಿರುವ ಅನ್ಯಾಯಗಳ ವಿರುದ್ಧ ಸಿಡಿದೇಳಬೇಕಿದೆ. ಗಡಿಭಾಗದಲ್ಲಿರುವವರ ಆತಂಕ ಬೆಂಗಳೂರಿನವರಿಗೆ ಅರ್ಥವಾಗುತ್ತಿಲ್ಲ. ಇನ್ನೂ ಉತ್ತರ ಕರ್ನಾಟಕ್ಕೆ ಆಗುತ್ತಿರುವ ಅನ್ಯಾಯ ಮುಂದುವರೆದಿರುವುದು ದುರದೃಷ್ಟಕರ. ಇತ್ತೀಚಿಗೆ ರಾಜ್ಯೋತ್ಸವ ಪ್ರಶಸ್ತಿಯಲ್ಲಿ, ಕರ್ನಾಟಕ ಲೋಕಸೇವಾ ಆಯೋಗದ ಸದಸ್ಯರ ನೇಮಕಾತಿಯಲ್ಲಿ ಉತ್ತರ ಕರ್ನಾಟಕದವರಿಗೆ ಅನ್ಯಾಯವಾಗಿದೆ. ಇಂಥಹ ವಿಧಾಯಕ ಕಾರ್ಯಕ್ರಮಗಳನ್ನು ಏರ್ಪಡಿಸಿದ ಸ್ಥಳೀಯ ಅಲ್ಲಮಪ್ರಭು ಸ್ವಾಮಿಗಳ ಹಾಗೂ ಗಡಿಕನ್ನಡಿಗರ ಬಳಗದ ಕಾರ್ಯವೈಖರಿಯು ಶ್ಲಾಘನೀಯವಾದುದು".[೮] ಗಡಿಭಾಗದ ಜನರಿಗೆ ಸರ್ಕಾರದ ಮಲತಾಯಿ ಧೋರಣೆಯ ಸಮಗ್ರ ಚಿತ್ರಣವನ್ನು, ಅರಿವನ್ನು ಮೂಡಿಸುವುದರ ಜೊತೆಗೆ ಒಗ್ಗಟ್ಟನ್ನು ರೂಪಿಸುವಲ್ಲಿ ಈ ರೀತಿಯಾದ ವಿದ್ವಾಂಸರ ಮಾತಗಳು ಸಹಾಯಕಾರಿಯಾಗಿವೆ. "ಮಠಗಳಲ್ಲಿ ಇಷ್ಟು ವಿಶೇಷವಾಗಿ ರಾಜ್ಯೋತ್ಸವ ಆಚರಣೆಮಾಡುತ್ತಿರುವುದು ಮಾದರಿಯಾಗಿದೆ. ಇದನ್ನು ಎಲ್ಲ ಮಠದವರು ಅನುಸರಿಸುವುದರಿಂದ ಕನ್ನಡ ಕ್ರಾಂತಿಯ ಕಹಳೆ ಊದಬಹುದು."[೯]

ಎಚ್.ಕೆ. ಪಾಟೀಲ, ಪ್ರಭಾಕರ ಕೋರೆ, ರಮೇಶ ಜಿಗಜಿಣಗಿ, ಪ್ರಕಾಶ ಹುಕ್ಕೇರಿ ಇನ್ನೂ ಮುಂತಾದ ರಾಜಕೀಯ ನಾಯಕರೂ ಸಹ ರಾಜ್ಯೋತ್ಸವಗಳಲ್ಲಿ ಪಾಲ್ಗೊಂಡು

ಕನ್ನಡ ಪರಂಪರೆ ಮತ್ತು ಇಂದಿನ ವಾಸ್ತವ ಚಿತ್ರಣವನ್ನು ಗಡಿಭಾಗದ ಜನತೆಯ ಮುಂದೆ ಇಟ್ಟಿದ್ದಾರೆ. "ಸರಕಾರಿ ಆದೇಶದಂತೆ ಮಾಡುವ ರಾಜ್ಯೋತ್ಸವಗಳಿಗೂ ಹಾಗೂ ಸ್ವಯಂ ಪ್ರೇರಣೆಯಿಂದ ಕೈಗೊಳ್ಳುತ್ತ ಬಂದಿರುವ ಗಡಿಗ್ರಾಮಗಳಾದ ಚಿಂಚಣಿ ಹಾಗೂ ಎಕ್ಸಂಬಾದಲ್ಲಿ ಜರುಗುವ ರಾಜ್ಯೋತ್ಸವಗಳಲ್ಲಿ ಅಂತರವಿದೆ. ಇಲ್ಲಿ ಕನ್ನಡದ ಜಾತ್ರೆ ನಿತ್ಯ ನಡೆಯುತ್ತಿದೆ".[೧೦] ಜಾತಿ ಭೇದವನ್ನು ತೊರೆದು ಎಲ್ಲರು ಕನ್ನಡಿಗರು ಎಂಬ ಮನೋಭಾವದಿಂದ ಈ ಭಾಗದ ಜನರು ರಾಜ್ಯೋತ್ಸವಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿರುವುದು ಗಡಿಕನ್ನಡಿಗರ ಬಳಗದ ಕಾರ್ಯವೈಖರಿ ಮತ್ತು ನಾಡು-ನುಡಿಪರ ಚಿಂತನೆಗಳೇ ಕಾರಣ ಎಂಬುದರಲ್ಲಿ ಎರಡು ಮಾತಿಲ್ಲ. "ಇಂದಿನ ದಿನಗಳಲ್ಲಿ ಗಡಿಪ್ರದೇಶಗಳಲ್ಲಿ ವೈವಿಧ್ಯಪೂರ್ಣವಾಗಿ ರಾಜ್ಯೋತ್ಸವ ಆಚರಿಸುತ್ತಿರುವ ಗಡಿಕನ್ನಡಿಗರ ಬಳಗವು ಸರಕಾರವು ಮಾಡುವ ಕನ್ನಡ ಕೆಲಸವನ್ನು ಮಾಡುತ್ತಿದೆ."[೧೧] ಹಾಗೂ ಸರಕಾರವು ಮಾಡಲಾರದಂತಹ ಕನ್ನಡಪರ ಕಾರ್ಯಕ್ರಮಗಳನ್ನು ಈ ಬಳಗವು ವರ್ಷಪೂರ್ತಿಯಾಗಿ ನಡೆಸಿಕೊಂಡು ಬರುತ್ತಿದೆ.

ಪ್ರಸಿದ್ಧ ರಂಗಕರ್ಮಿ ಶ್ರೀ ಏಣಗಿ ಬಾಳಪ್ಪನವರು ರಾಜೋತ್ಸವದಲ್ಲಿ ಭಾಗಿಗಳಾಗಿದ್ದು, ಗಡಿಭಾಗದ ಜನರಿಗೆ ಕನ್ನಡ ರಂಗಭೂಮಿಯ ಬಗೆಗೆ ಅಭಿಮಾನವನ್ನು ಮತ್ತು ಆಸಕ್ತಿಯನ್ನುಂಟುಮಾಡಿದೆ. ಡಾ. ಜಿ. ಎಸ್. ಸಿದ್ಧಲಿಂಗಯ್ಯ ಅವರು ಗಡಿಕನ್ನಡಿಗರ ಬಳಗದ ರಾಜ್ಯೋತ್ಸವದಲ್ಲಿ ಭಾಗವಹಿಸಿ "ಚಿಂಚಣಿ ಮಠದ ಹಾಗೆ ಕನ್ನಡಕಾರ್ಯ ಎಲ್ಲ ಗಡಿಭಾಗದಲ್ಲಿ ನಡೆಯುವುದು ಅಗತ್ಯವಾಗಿದೆ".[೧೨] ಎಂದು ಅಭಿಪ್ರಾಯಪಟ್ಟಿದ್ದಾರೆ. "ಕನ್ನಡ ಬೆಳೆದರೆ ಕನ್ನಡಿಗರು ಹಾಗೂ ಕರ್ನಾಟಕ ಬೆಳೆಯುತ್ತದೆ. ಅದಕ್ಕಾಗಿ ನಮ್ಮ ಇಂದಿನ ಮಕ್ಕಳಿಗೆ ಕನ್ನಡಸಂಸ್ಕೃತಿಯ ಅರಿವು ಮೂಡಿಸಬೇಕು. ಚಿಂಚಣಿ ಶ್ರೀ ಮಠದಂತೆ ನಾಡಿನ ಎಲ್ಲ ಮಠಗಳು ಕನ್ನಡಸೇವೆ ಸಲ್ಲಿಸಬೇಕು."[೧೩] ಕನ್ನಡ ಕಾರ್ಯ ಒಬ್ಬ ವ್ಯಕ್ತಿಯಿಂದ ಸಾಧ್ಯವಿಲ್ಲ. 'ಹನಿ ಹನಿಕೂಡಿದರೆ ಹಳ್ಳ, ತೆನೆ ತೆನೆ ಕೂಡಿದರೆ ರಾಶಿ' ಎಂಬ ನಾಣ್ಣುಡಿಯಂತೆ ಪ್ರತಿಯೊಬ್ಬ ಕನ್ನಡಿಗನು ಈ ನಾಡಿನ ಅನ್ನವನ್ನು ತಿನ್ನುತ್ತಿದ್ದಾನೆ. ಅದರ ಋಣವನ್ನು ತೀರಿಸಬೇಕಾದರೆ ಒಗ್ಗಟ್ಟಿನಿಂದ ಕನ್ನಡ ನಾಡಿನ ಭವ್ಯ ಸಂಸ್ಕೃತಿ ಮತ್ತು ಪರಂಪರೆಯನ್ನು ರಕ್ಷಿಸುವುದು ಅವಶ್ಯವಾಗಿದೆ. ಮುಂದಿನ ತಲೆಮಾರಿಗೆ ಕನ್ನಡದ ಪರಂಪರೆಯನ್ನು ಹಸ್ತಾಂತರಿಸುವುದು ಎಲ್ಲ ಕನ್ನಡಿಗರ ಆದ್ಯ ಕರ್ತವ್ಯ. ಇಂತಹ ಕರ್ತವ್ಯವನ್ನು ಗಡಿಕನ್ನಡಿಗರ ಬಳಗ ನಿತ್ಯ ಗೈಯ್ಯುತ್ತಿದೆ, ಗೈಯ್ಯುವಂತೆ ಪ್ರೇರೇಪಿಸುತ್ತಿದೆ.

'ಕನ್ನಡ ಕನ್ನಡ ಬರ್‍ರಿ ನಮ್ಮ ಸಂಗಡ' ಎಂಬ ಘೋಷಣೆಯನ್ನು ಕೂಗುತ್ತ ಕರ್ನಾಟಕದ ನಾಡು-ನುಡಿಗೆ ಶ್ರಮಿಸುತ್ತಿರುವ ಪ್ರೊ. ಚಂದ್ರಶೇಖರ ಪಾಟೀಲರನ್ನು ಚಿಂಚಣಿ ಹಾಗೂ ಸುತ್ತಲಿನ ಗಡಿಪ್ರದೇಶಕ್ಕೆ ಪರಿಚಯಿಸಿದ್ದು ಗಡಿಕನ್ನಡಿಗರ ಬಳಗದ

ಒಂದು ಮಹತ್ವಪೂರ್ಣ ಕಾರ್ಯ. "ಕನ್ನಡಿಗರಾದ ನಾವು ಕನ್ನಡವನ್ನು ಮರೆತು ಬದುಕುತ್ತಿದ್ದೇವೆ. ಗಡಿಭಾಗದಲ್ಲಿ ಮಠಗಳು ಕನ್ನಡಪರವಾಗಿ ಹೋರಾಟ ಮಾಡಿರುವುದನ್ನು ಸ್ಮರಿಸಬಹುದು."[೧೪] ಇಂತಹ ಮಾತುಗಳು ಕನ್ನಡಿಗರು ಕನ್ನಡವನ್ನು ಮರೆಯಬಾರದು, ಕನ್ನಡ ನಮ್ಮ ಉಸಿರು, ಉಸಿರುವರೆಗೆ ಕನ್ನಡವನ್ನು ಬಳಸಬೇಕೆಂಬ ಭಾವನೆಯನ್ನು ಮೂಡಿಸುತ್ತದೆ. ತಾಯ್ನುಡಿ, ತಾಯ್ನೆಲವನ್ನು ಮರೆತು ಬದುಕುತ್ತಿರುವ ನಿರಭಿಮಾನಿ ಕನ್ನಡಿಗರಿಗೆ ಕನ್ನಡ ದೇವಿಯ ಸ್ತನ್ಯಪಾನಕ್ಕೆ ಅವಕಾಶ ನೀಡಿ ಕನ್ನಡ ಅಭಿಮಾನ ಉಂಟುಮಾಡುವಲ್ಲಿ ಸಾಹಿತಿ-ವಿದ್ವಾಂಸರ ಮಾತುಗಳು ಪೂರಕ ಮತ್ತು ಪರಿಣಾಮಕಾರಿಯಾಗಿವೆ. ಸತ್ತಂತಿಹರನ್ನು ಬಡಿದೆಚ್ಚರಿಸುವ ಕನ್ನಡ ಡಿಂಡಿಮ ನಾದವಾಗಿದೆ.

"ಎಲ್ಲಿಯವರೆಗೆ ಕನ್ನಡಿಗರಲ್ಲಿ ಕನ್ನಡಾಭಿಮಾನ ಮತ್ತು ಸಹೃದಯತೆ ಜಾಗೃತಗೊಳ್ಳುವದಿಲ್ಲವೋ ಅಲ್ಲಿಯವರೆಗೆ ನಾವು ಕರ್ನಾಟಕದಲ್ಲಿ ಇದ್ದೂ ಇಲ್ಲದಂತೆ"[೧೫] ಇಂತಹ ವಾತಾವರಣವು ಗಡಿಭಾಗದಲ್ಲಿದ್ದು ಅಂಥವರನ್ನು ಜಾಗೃತಗೊಳಿಸುವಲ್ಲಿ ಗಡಿಕನ್ನಡಿಗರ ಬಳಗದ ಕಾರ್ಯ ಗಮನಾರ್ಹವಾದುದ್ದು. ಮಹಾಜನ ವರದಿ, ಗಡಿಸಮಸ್ಯೆ, ಕನ್ನಡಿಗರ ಹಕ್ಕು-ಕರ್ತವ್ಯ, ಸಾಹಿತಿ- ವಿದ್ವಾಂಸರ ದರ್ಶನ, ವಿಶೇಷ ಉಪನ್ಯಾಸ, ಸಾಂಸ್ಕೃತಿಕ ಚಿಂತನೆ, ನಾಡು-ನುಡಿ ಸಂಸ್ಕೃತಿಪರ ಪುಸ್ತಕಗಳ ಬಿಡುಗಡೆ ಮುಂತಾದ ವಿವಿಧ ರೀತಿಯಲ್ಲಿ ಕನ್ನಡ ಪರಿಸರವನ್ನು ನಿರ್ಮಾಣಮಾಡುವ ಚಟುವಟಿಕೆಗಳನ್ನು ಮಾಡುತ್ತಿದೆ. ರಾಜ್ಯೋತ್ಸವದ ನೆಪದಲ್ಲಿ ಎಲ್ಲ ಕನ್ನಡಿಗರು ಒಂದೆಡೆ ಸೇರಿ ತಮ್ಮ ನೋವು-ನಲಿವುಗಳನ್ನು ಹಂಚಿಕೊಳ್ಳಲು ಒಂದು ಒಳ್ಳೆಯ ಅವಕಾಶವನ್ನು ಕಲ್ಪಿಸಿ ಕೊಡುತ್ತಿದೆ. ಕನ್ನಡ ನಾಡಿನ ಜ್ವಲಂತ ಸಮಸ್ಯೆಗಳಾದ; ಪ್ರಾದೇಶಿಕ ಭಿನ್ನತೆ ಉದ್ಯೋಗಗಳಲ್ಲಿ ತಾರತಮ್ಯ, ಕೇಂದ್ರದ ಮಲತಾಯಿ ಧೋರಣೆ, ಗಡಿವಿವಾದ, ಇಂಗ್ಲೀಷ ಮಾಧ್ಯಮ ಶಿಕ್ಷಣ ಇನ್ನೂ ಹಲವಾರು ರೀತಿಯ ಚಿಂತನೆಗಳನ್ನು ಜನರ ಮನಸ್ಸಿನಲ್ಲಿ ಮೂಡಿಸಿ ನಾಡಿನ ಬಗ್ಗೆ ಹಾಗೂ ನುಡಿಯ ಬಗ್ಗೆ ಜಾಗೃತಿಯನ್ನು ಮಾಡುವಲ್ಲಿ ಗಡಿಕನ್ನಡಿಗರ ಬಳಗ ಗಮನಾರ್ಹ ಕಾರ್ಯಗೈಯ್ಯುತ್ತಿದೆ.

ಸುಪ್ರಸಿದ್ಧ ಸಾಹಿತಿ ಜಯಂತ ಕಾಯ್ಕಿಣಿಯವರು ಕೂಡ ಗಡಿಗ್ರಾಮ ಚಿಂಚಣಿಗೆ ಬಂದು ಜನರಲ್ಲಿ ನುಡಿಜಾಗೃತಿಯನ್ನು ಮೂಡಿಸಿದ್ದಾರೆ. "ಸಾಹಿತ್ಯ, ಧರ್ಮ ಮತ್ತು ರಾಜಕಾರಣಿಗಳು ಪ್ರಾಮಾಣಿಕ ಕೆಲಸಮಾಡಿ ನೈತಿಕ ಪ್ರಜ್ಞೆಮೂಡಿಸುವ ಕೆಲಸ ಮಾಡಬೇಕು. ರಾಜ್ಯದ ಗಡಿಭಾಗಗಳಿಗಿಂತ ರಾಜಧಾನಿ ಬೆಂಗಳೂರಿನಲ್ಲಿ ಕನ್ನಡ ಉಳಿಯಬೇಕಾಗಿದೆ. ಪಟ್ಟಣಗಳಲ್ಲಿ ಯಾರಿಗೂ ಕನ್ನಡ ಬೇಡವಾಗಿದೆ."[೧೬] ಕನ್ನಡ ಸ್ಥಿತಿ-ಗತಿಗಳ ಕುರಿತು ಹೇಳಿದ ಈ ಮಾತುಗಳು ಗಡಿಕನ್ನಡಿಗರಿಗೆ ನಮ್ಮ ಭಾಗದಲ್ಲಿ ಕನ್ನಡವನ್ನು ಉಳಿಸಿಕೊಳ್ಳಬೇಕೆಂಬ ಭಾವನ್ನು ಬಲಿಸುತ್ತದೆ. ಬೆಂಗಳೂರಿನಂತಹ ನಮ್ಮ

ರಾಜಧಾನಿಯಲ್ಲಿ ಕನ್ನಡ ಕೊರಗುತ್ತಿದೆ ಎಂಬುದರ ವಾಸ್ತವ ಚಿತ್ರಣ ದೊರೆಯುತ್ತದೆ. ಹಳ್ಳಿಗಳಲ್ಲಿ ಕನ್ನಡ ಉಳಿದು ಬೆಳೆಯುತ್ತಿದೆ. ಎಂಬ ನೈಜಸತ್ಯವನ್ನು ತಿಳಿದು ಈ ಭಾಗದ ಜನರು ಕನ್ನಡದ ಬಗ್ಗೆ ವಿಶೇಷವಾದ ಅಭಿಮಾನ ಮತ್ತು ಪ್ರೀತಿಯನ್ನು ಹೊಂದಲು ಪ್ರೇರಕವಾಗುತ್ತವೆ. ಆದರೆ "ಜನಪ್ರತಿನಿಧಿಗಳ ಭಾಷಾ ನಿರಭಿಮಾನದಿಂದಾಗಿ ತಾಯ್ನೆಲದಲ್ಲಿಯೇ ನಾಡು-ನುಡಿ ರಕ್ಷಣೆಗಾಗಿ ಹೋರಾಟ ನಡೆಸಬೇಕಾದ ದುರಂತ ಬಂದೊದಗಿದೆ."[೧೭] ಇದನ್ನು ಮನಗಂಡು ಕನ್ನಡಿಗರು ನಾಡು-ನುಡಿಪರ ಹೋರಾಟಕ್ಕೆ ಅನಿಯಾಗಬೇಕೆಂಬುದು ಗಡಿಕನ್ನಡಿಗರಲ್ಲಿ ಗಟ್ಟಿಗೊಂಡಿದೆ. ಈ ರೀತಿಯ ಹೋರಾಟಗಳಲ್ಲಿ ಭಾಗಿಗಳಾಗುತ್ತಿದ್ದಾರೆ.

ಉತ್ತರ ಕರ್ನಾಟಕದ ಮಹಾನ್ ವಿದ್ವಾಂಸ, ಸಂಶೋಧಕರಾದ ಡಾ. ಎಂ.ಎಂ. ಕಲಬುರ್ಗಿಯವರು ಚಿಂಚಣಿಗೆ ಬಂದು ತಮ್ಮ ನಾಡು-ನುಡಿಪರ ವಿದ್ವತ್ ವಿಚಾರಗಳನ್ನು ಜನತೆಗೆ ತಿಳಿಸುವ ಸದಾವಕಾಶವನ್ನು ಗಡಿಕನ್ನಡಿಗರ ಬಳಗವು ಮಾಡಿಕೊಟ್ಟಿದೆ. "ಚಿಕ್ಕೋಡಿ ತಾಲೂಕಿನ ಗಡಿಭಾಗದಲ್ಲಿ ಕಳೆದ ೧೦ ವರ್ಷಗಳಿಂದಲೂ ರಾಜ್ಯೋತ್ಸವ ಸಂದರ್ಭದಲ್ಲಿ ಪ್ರಕಟಿಸುತ್ತಿರುವ ಕನ್ನಡಪರ ಪುಸ್ತಕಗಳ ಅಭ್ಯಾಸ ಅನುಷ್ಠಾನಕ್ಕೆ ಬರುಬೇಕು. ಮುಂಬರುವ ದಿನಗಳಲ್ಲಿ ಗಡಿಕನ್ನಡಿಗರ ಬಳಗ ಕನ್ನಡದ ಶ್ರೇಷ್ಠ ಪುಸ್ತಕಗಳನ್ನು ಮರಾಠಿಗೆ ಅನುವಾದಿಸಿ ಮರಾಠಿಗರಿಗೂ ಕನ್ನಡಜಾಗೃತಿ ಮೂಡಿಸುವ ಅಗತ್ಯವಿದೆ."[೧೮] ಈ ಮೂಲಕ ಕನ್ನಡವು ಸೀಮಾತೀತವಾಗಿ ಹರಡಬೇಕು. ಇದು ಇಂದಿನ ಅಗತ್ಯತೆ ಎಂಬುದನ್ನು ಗಡಿ ಕನ್ನಡಿಗರಿಗೆ ಈ ಬಳಗವು ಅರುಹುತ್ತಿದೆ. ಕನ್ನಡ ರಾಜ್ಯೋತ್ಸವಕ್ಕೆ ಆಗಮಿಸಿದ ಎಂ.ಎಂ. ಕಲಬುರ್ಗಿಯವರು ಕನ್ನಡಿಗರಿಗೆ ಕನ್ನಡ ಭಾಷೆಯ ಕುರಿತು ಕಾಳಜಿ ಮೂಡಿಸುವ ವಿಶೇಷ ಕೆಲಸವಾಗಬೇಕಿದೆ. ಎಂಬುದನ್ನು ತಿಳಿಸುವುದರ ಮೂಲಕ ಈ ಭಾಗದ ಕನ್ನಡದ ಜನತೆಯು ಕನ್ನಡ ಭಾಷೆಯ ಬಗ್ಗೆ ಚಿಂತನೆ ಮಾಡುವಂತೆ ಪ್ರೇರೇಪಿಸಿದ್ದಾರೆ. ಶ್ರೀ ಮಠವು ಪ್ರಕಟಿಸಿದ ಪುಸ್ತಕ 'ಕನ್ನಡ-ಕನ್ನಡಿಗ – ಕರ್ನಾಟಕ'ವು ಎಂ.ಎ. ಕನ್ನಡ ವಿಭಾಗದ ವಿದ್ಯಾರ್ಥಿಗಳಿಗೆ ಪಠ್ಯವನ್ನಾಗಿ ಅಳವಡಿಸಬೇಕೆಂದು ಹೇಳುವುದರ ಮೂಲಕ ಗಡಿಕನ್ನಡಿಗರ ಬಳಗ ಬಿಡುಗಡೆಗೊಳಿಸಿದ ಕೃತಿಯ ಉಪಯುಕ್ತತೆಯನ್ನು ತಿಳಿಸಿದ್ದಾರೆ. "ಮಹಾರಾಷ್ಟ್ರದ ಪೂನಾ, ಕೊಲ್ಹಾಪೂರ, ಕರಾಡ, ಸೊಲ್ಲಾಪೂರ, ಸಾಂಗಲಿ ಸೇರಿದಂತೆ ೮ – ೧೦ ಜಿಲ್ಲೆಗಳು ಕರ್ನಾಟಕ್ಕೆ ಸೇರಿದವುಗಳು. ಅವರ ಮಾತೃಭಾಷೆ ಇಂದಿಗೂ ಕನ್ನಡವಾಗಿದೆ. ಅಂದು ಬೆಳಗಾವಿ ಕೇಂದ್ರಸ್ಥಾನವಾಗಿತ್ತು. ಭಾಷಿಕವಾಗಿ ಸುತ್ತಲಿನ ಪರಿಸರವನ್ನು ಕಳೆದುಕೊಂಡಿದ್ದರಿಂದಲೇ ಇಂದು ಬೆಳಗಾವಿ ಗಡಿಯಾಗಿದೆ. ಪ್ರಕಟಗೊಂಡಿರುವ ಈ ಪುಸ್ತಕಗಳನ್ನು ಮರಾಠಿಯಲ್ಲಿ ಮುದ್ರಿಸಿಕೊಡುವ ಮೂಲಕ ಅವರಿಗೆ ಹಳೆಯ ಇತಿಹಾಸ ತಿಳಿಸಬೇಕು. ಕನ್ನಡಿಗರು ಮರಾಠಿಗರಲ್ಲಿ ಕನ್ನಡ ಮನೋಭಾವನೆ ಬೆಳೆಸಬೇಕು."[೧೯] ಈ ರೀತಿಯ ಕರ್ನಾಟಕದ

ಗಡಿಯ ಕುರಿತು ಐತಿಹಾಸಿಕ ವಿಷಯವನ್ನು ಗಡಿನಾಡಿನ ಕನ್ನಡಿಗರಿಗೆ ತಿಳಿಸುವ ಜವಾಬ್ದಾರಿಯನು ಗಡಿಕನ್ನಡಿಗರ ಬಳಗ ಹೊತ್ತುಕೊಂಡಿದೆ. ಈ ಜವಾಬ್ದಾರಿಯನ್ನು ನಿಭಾಯಿಸಲು ಹಲವಾರು ಸಾಹಿತಿ–ವಿದ್ವಾಂಸರನ್ನು ರಾಜ್ಯೋತ್ಸವಕ್ಕೆ ಆಹ್ವಾನಿಸಿ ಅವರಿಂದ ಕನ್ನಡಪರ ಚಿಂತನೆಗಳನ್ನು ಮತ್ತು ವಿಚಾರಧಾರೆಗಳನ್ನು ಜನತೆಗೆ ತಲುಪಿಸುವದರ ಮೂಲಕ, ಕನ್ನಡಜಾಗೃತಿಯಲ್ಲಿ ತನ್ನನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಿದೆ. ಗಡಿಕನ್ನಡಿಗರ ಬಳಗದಲ್ಲಿ ಹಲವಾರು ಯುವಕರು ಸ್ವಯಂ ಸ್ಫೂರ್ತಿಯಿಂದ ಸೇವೆ ಮಾಡಲು ಸಿದ್ಧರಾಗಿ ನಿಂತಿದ್ದಾರೆ. ಅವರೆಲ್ಲರು ಕನ್ನಡ ಕೆಲಸವನ್ನು ಆತ್ಮಸಂತೋಷಕ್ಕಾಗಿ ಮಾಡುವಂತೆ ಮಾಡುತ್ತಿದ್ದಾರೆ. ಇದರಲ್ಲಿ ಎಲ್ಲ ಯುವಕರು ಜಾತಿಭೇದವನ್ನು ಮರೆತು ಒಂದೇ ಮನೋಭಾವನೆಯಿಂದ ಸಿರಿಗನ್ನಡಾಂಬೆಯ ಸೇವೆಯನ್ನು ಮಾಡುತ್ತಿದ್ದಾರೆ. ಪ್ರತಿವರ್ಷ ನವ್ಹೆಂಬರ ೨ನೇ ದಿನ ಚಿಂಚಣಿ ಹಾಗೂ ಸುತ್ತಲಿನ ಜನರಿಗೆ ಒಂದು ದೊಡ್ಡ ಜಾತ್ರೆಯಂತೆ ಚಿಂಚಣಿ ಮಠದಲ್ಲಿ ಕನ್ನಡ ರಾಜ್ಯೋತ್ಸವ ಜರುಗುತ್ತಿದೆ. ಈ ರಾಜ್ಯೋತ್ಸವ ಗಡಿ ಕನ್ನಡಿಗರ ಬಳಗದ ಆಶ್ರಯದಲ್ಲಿ ಹಾಗೂ ಅಲ್ಲಮಪ್ರಭು ಸ್ವಾಮಿಗಳ ನೇತೃತ್ವದಲ್ಲಿ ನಡೆಯುತ್ತಿರುವುದು ಅತ್ಯಮೂಲ್ಯವಾದ ಕನ್ನಡದ ಕಾರ್ಯವಾಗಿದೆ.

**ಕಾರ್ಯಕ್ರಮ / ಸ್ಪರ್ಧೆಗಳು:**

ರಾಜ್ಯೋತ್ಸವ ಆಚರಣೆಯೊಂದಿಗೆ ಗಡಿಕನ್ನಡಿಗರ ಬಳಗವು ವಿಶೇಷವಾದ ಕನ್ನಡ ಕಾರ್ಯಕ್ರಮಗಳನ್ನು ಆಯೋಜಿಸುತ್ತಿದೆ. ಸ್ಥಾಪನೆಗೊಂಡಾಗಿನಿಂದ ಕನ್ನಡ ಕಾರ್ಯಕ್ರಮಗಳನ್ನು ಅವ್ಯಾಹತವಾಗಿ ನಡೆಸಿಕೊಂಡು ಬರುತ್ತಿದೆ. ಕನ್ನಡ ಸಾಹಿತ್ಯ, ಸಂಸ್ಕೃತಿಗೆ ಸಂಬಂಧಿಸಿದಂತೆ ಭಾಷಣ, ಕಾವ್ಯಗಾಯನ ಹಾಗೂ ರಂಗೋಲಿ ಸ್ಪರ್ಧೆ (೧೯೯೮). ಉಪಗ್ರಹ ವಾಹಿನಿ ವರವೋ ಶಾಪವೋ ಎಂಬ ವಿಷಯದ ಮೇಲೆ ಚರ್ಚಾಕೂಟವನ್ನು ಏರ್ಪಡಿಸಿದೆ (೨೦೦೦). "ಗಡಿಭಾಗದಲ್ಲಿ ಕನ್ನಡದ ಅಭಿವೃದ್ಧಿಗಾಗಿ ಚರ್ಚಾಕೂಟ ಏರ್ಪಡಿಸುವ ಅವಶ್ಯಕತೆ ಇದೆ".[೨೦] ಇಂತಹ ಅವಶ್ಯಕತೆಯನ್ನು ಈಡೇರಿಸುವದೇ ಗಡಿಕನ್ನಡಿಗರ ಬಳಗದ ಮುಖ್ಯ ಉದ್ದೇಶ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಹಯೋಗದೊಂದಿಗೆ 'ಚಿಗುರು' ಕಾರ್ಯಕ್ರಮದಲ್ಲಿ ಜಾನಪದ ನೃತ್ಯವನ್ನಾಧರಿಸಿದ ಗಾಯನ ಸ್ಪರ್ಧೆ (೨೦೦೧). ಶ್ರೀ ಗುರುರಾಜ ಕೆಂಧೋಳಿ ಮತ್ತು ಸಂಗಡಿಗರಿಂದ ಸಂಗೀತ ಸಂಜೆ (೨೦೦೦). ಕರ್ನಾಟಕ ದರ್ಶನ ಮತ್ತು ಪ್ರದರ್ಶನ ಕಾರ್ಯಕ್ರಮ (೨೦೦೧). ವಿಶೇಷ ಉಪನ್ಯಾಸಗಳು (೨೦೦೨). ಚಿಕ್ಕೋಡಿಯಲ್ಲಿ ವಿವಿಧ ಸಂಸ್ಥೆಗಳೊಂದಿಗೆ ಸೇರಿ ಕಣವಿಯವರ ಅಮೃತ ಮಹೋತ್ಸವದ (೨೦೦೩) ಅದ್ಧೂರಿ ಕಾರ್ಯಕ್ರಮ ನಡೆಸುವಲ್ಲಿ ಈ ಬಳಗ ತನ್ನದೇ ಆದ ಪಾತ್ರವಹಿಸಿದೆ. ಕನ್ನಡ ಕವಿಗಳ ಹೆಸರು ಬರೆಯುವ ಸ್ಪರ್ಧೆಯನ್ನು ಏರ್ಪಡಿಸಿ ಮಕ್ಕಳಲ್ಲಿ ಕವಿ ಕೃತಿಗಳ ಕುರಿತು

ತಿಳುವಳಿಕೆ ಮೂಡಿಸಿದೆ. ಕರ್ನಾಟಕ ಸುವರ್ಣಮಹೋತ್ಸವ ನಿಮಿತ್ತ ಜಾನಪದ ಸಾಂಸ್ಕೃತಿಕ ಮೇಳವನ್ನು (೨೦೦೬) ಯಶಸ್ವಿಯಾಗಿ ನಿರ್ವಹಿಸಿ ಸಾಧಕರಿಗೆ ಸನ್ಮಾನವನ್ನು ಮಾಡಿದ್ದು ಒಂದು ವಿಶೇಷವಾದ ಕಾರ್ಯ. ಚಿಂಚಣಿ, ಚಿಕ್ಕೋಡಿ, ಯಡೂರು ಸ್ವಾಮಿಗಳ ಸಾನಿಧ್ಯದಲ್ಲಿ ಚಂಪಾ, ಗೋರೂರು ಚನ್ನಬಸಪ್ಪ, ಮುಖ್ಯಮಂತ್ರಿ ಚಂದ್ರು, ಶ್ರೀನಾಥ, ಟಿ.ಎಸ್. ನಾಗಭರಣ, ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ, ಬಿ.ಟಿ. ಲಲಿತಾನಾಯಿಕ, ಡಾ. ಎಲ್. ಹನುಮಂತಯ್ಯಾ, ಮಾಳವಿಕಾ ಅವಿನಾಷ, ಮೋಹನ ಪಾಟೀಲ ಮುಂತಾದ ಗಣ್ಯರ ನೇತೃತ್ವದಲ್ಲಿ ಗಡಿಕನ್ನಡಿಗರ ಬಳಗವು ವಿವಿಧ ಕನ್ನಡ ಸಂಘಟನೆಗಳೊಂದಿಗೆ ಸೇರಿ ಕನ್ನಡನುಡಿ-ಕನ್ನಡಗಡಿ ಜಾಥಾವನ್ನು (೨೦೦೬) ಚಿಕ್ಕೋಡಿಯಲ್ಲಿ ಅತ್ಯಂತ ಯಶಸ್ವಿಯುತವಾಗಿ ನಡೆಸುವುದರ ಮೂಲಕ ಕನ್ನಡದ ಶಕ್ತಿಯನ್ನು ಮತ್ತು ಸತ್ವವನ್ನು ತಿಳಿಸಿ ಜನತೆಯಲ್ಲಿ ಕನ್ನಡ ಜಾಗೃತಿಯನ್ನು ಮೂಡಿಸಿದೆ.

**ಹೋರಾಟಗಳು:**

ಗಡಿಕನ್ನಡಿಗರ ಬಳಗವು ತನ್ನ ಕಾರ್ಯವ್ಯಾಪ್ತಿಯನ್ನು ಕೇವಲ ಸಭೆ-ಸಮಾರಂಭಗಳಿಗೆ ಸೀಮಿತಗೊಳಿಸಿಕೊಂಡಿಲ್ಲ. ಕನ್ನಡನಾಡು-ನುಡಿ, ನೆಲ-ಜಲ, ಜನ-ಜನಾಂಗಕ್ಕೆ ಯಾವದೇ ರೀತಿಯಲ್ಲಿ ಅನ್ಯಾಯವಾಗುಂತಹ ಘಟನೆಗಳು ನಡೆದರೆ ತತ್‌ಕ್ಷಣ ಆ ಘಟನೆಯನ್ನು ಖಂಡಿಸುತ್ತದೆ. ಬೀದಿಗಿಳಿದು ಹೋರಾಟವನ್ನು ಮಾಡಿ ಸರಕಾರದ ಅಧಿಕಾರಿಗಳಿಗೆ ತಮ್ಮ ಮನವಿಯನ್ನು ಮತ್ತು ಬೇಡಿಕೆಯನ್ನು ಸಲ್ಲಿಸುತ್ತದೆ. ಕನ್ನಡಕ್ಕೆ ಏನೆ ಅನ್ಯಾಯವಾದರೂ ಚಿಕ್ಕೋಡಿ ಭಾಗದಲ್ಲಿ ಮೊಟ್ಟಮೊದಲ ಹೋರಾಟದ ಧ್ವನಿ ಹೊರಡುವುದೇ ಈ ಗಡಿಕನ್ನಡಿಗರ ಬಳಗದಿಂದ. ಅನ್ಯಾಯವನ್ನು ಸರಿಪಡಿಸುವಂತೆ ಸರಕಾರಕ್ಕೆ ಒತ್ತಾಯ ಮಾಡುವುದರ ಮೂಲಕ ಗಡಿಕನ್ನಡಿಗರಲ್ಲಿ ಕನ್ನಡದ ಬಗ್ಗೆ ಕೆಚ್ಚನ್ನು ಮತ್ತು ನಚ್ಚನ್ನು ಮೂಡಿಸುತ್ತಿದೆ.

ಮಾಹಾಜನವರದಿಯ ಯಥಾವತ್ತಾದ ಅನುಷ್ಠಾನಕ್ಕೆ ಒತ್ತಾಯಿಸಿ ಈ ಬಳಗವು ಚಿಂಚಣಿ ಶ್ರೀಗಳ ನೇತೃತ್ವದಲ್ಲಿ ಮಹಾರಾಷ್ಟ್ರ ಸರಕಾರದ ಗಡಿವಿವಾದವನ್ನು ಬಲವಾಗಿ ಖಂಡಿಸಿದೆ (೨೦೦೪). "ಕನ್ನಡದ ನೆಲ-ಜಲ-ಭಾಷೆಗಳ ಕುರಿತು, ಸಮಸ್ಯೆ ಉಂಟಾದಾಗ ಕನ್ನಡಕ್ಕೆ ಅನ್ಯಾಯವಾಗದಂತೆ ನೋಡಿಕೊಳ್ಳಲು ನಾವು ಹೋರಾಟ ನಡೆಸುತ್ತೇವೆ. ಗಡಿಭಾಗದ ನಿಪ್ಪಾಣಿ, ಬೆಳಗಾವಿ ಮತ್ತಿತರ ಪ್ರದೇಶಗಳು ಮಹಾರಾಷ್ಟ್ರಕ್ಕೆ ಸಿಗಬೇಕೆಂದು ಅಲ್ಲಿಯ ಸರಕಾರ ಸುಪ್ರೀಂಕೋರ್ಟ ಕಟ್ಟೆ ಹತ್ತಿರುವ ಕ್ರಮವನ್ನು ನಾವು ಖಂಡಿಸುತ್ತೇವೆ. ಮಹಾರಾಷ್ಟ್ರದಲ್ಲಿರುವ ಕನ್ನಡಿಗರೆಲ್ಲರೂ ಕಳೆದುಹೋದ ಕನ್ನಡಿಗರೇ ಆಗಿದ್ದಾರೆ. ಭಾಷೆಯ ದೃಷ್ಟಿಯಿಂದ, ಸಾಂಸ್ಕೃತಿಕ ದೃಷ್ಟಿಯಿಂದ, ಚರಿತ್ರೆಯ ದೃಷ್ಟಿಯಿಂದ, ಕರ್ನಾಟಕದೊಂದಿಗೆ ಮಹಾರಾಷ್ಟ್ರದವರಿದ್ದಾರೆ. ಎಂಬುದನ್ನು ಅಲ್ಲಿಯ ಸರಕಾರ ತಿಳಿಯುತ್ತಿಲ್ಲ. ಗಡಿಭಾಗದಲ್ಲಿನ ಹೊಲಸುರಾಜಕೀಯ ಕೊನೆಗೊಳ್ಳಬೇಕು, ಮಹಾಜನ

ವರದಿಯನ್ನು ಜಾರಿಗೊಳಿಸಲಾರದೆ ಕೇಂದ್ರ ಸರಕಾರ ಬೇಜವಾಬ್ದಾರಿಯಿಂದ ನಡೆದುಕೊಳ್ಳುತ್ತಿದೆ. ಇದು ಖಂಡನೀಯವಾದದ್ದು".[೨೧] ಎಂಬುದನ್ನು ಗಡಿಕನ್ನಡಿಗರ ಬಳಗವು ಪ್ರತಿಭಟನೆಯ ಮೂಲಕ ಮಹಾರಾಷ್ಟ್ರ ಸರಕಾರದ ನಿಲುವನ್ನು ಹಾಗೂ ಕೇಂದ್ರದ ಕ್ರಮವನ್ನು ವಿರೋಧಿಸಿದೆ.

ಬೆಳಗಾವಿ ಮಹಾನಗರ ಪಾಲಿಕೆಯು ತೆಗೆದುಕೊಂಡ ಬೆಳಗಾವಿ, ನಿಪ್ಪಾಣಿ, ಚಿಕ್ಕೋಡಿ ಮುಂತಾದ ಭಾಗಗಳನ್ನು ಮಹಾರಾಷ್ಟ್ರಕ್ಕೆ ಸೇರಿಸಬೇಕೆಂಬ ನಿರ್ಣಯವನ್ನು ಗಡಿಕನ್ನಡಿಗರ ಬಳಗವು ವಿವಿಧ ಸ್ವಾಮೀಜಿಗಳ ನೇತೃತ್ವದಲ್ಲಿ ಖಂಡಿಸಿದೆ (೨೦೦೫). ಸರಕಾರಕ್ಕೆ ಮನವಿ ಸಲ್ಲಿಸಿದೆ. "ಇತ್ತೀಚಿಗೆ ಬೆಳಗಾವಿಯ ಮಹಾನಗರ ಪಾಲಿಕೆಯು ತೆಗೆದುಕೊಂಡಿರುವ ನಿರ್ಣಯವು ರಾಜ್ಯದ ಅಖಂಡತೆಗೆ ಮಾರಕ, ತನ್ನ ಅಧಿಕಾರ ವ್ಯಾಪ್ತಿಯನ್ನು ಮೀರಿ ತೆಗೆದುಕೊಂಡಿರುವ ನಿರ್ಣಯವನ್ನು ನಾಡಿನಾದ್ಯಂತ ಎಲ್ಲ ಕನ್ನಡಪರ ಸಂಘಟನೆಗಳು ಒಕ್ಕೊರಲಿನಿಂದ ಖಂಡಿಸುತ್ತವೆ. ಘನ ಸರಕಾರವೂ ಸಹ ಈ ವಿಷಯವನ್ನು ಗಂಭೀರವಾಗಿ ತೆಗೆದುಕೊಂಡು ನಾಡದ್ರೋಹಿಗಳನ್ನು ಶಿಕ್ಷಿಸಬೇಕು"[೨೨] ಎಂದು ಸರಕಾರವನ್ನು ಒತ್ತಾಯಿಸಿ ನಗರ ಪಾಲಿಕೆಯ ಕಾರ್ಯವನ್ನು ಖಂಡಿಸಿ ಮನವಿಯನ್ನು ಅರ್ಪಿಸಿದೆ. ಮಹಾರಾಷ್ಟ್ರದ ಕೊಲ್ಹಾಪೂರ, ಸಾಂಗಲಿ, ಮಿರಜ ಮುಂತಾದ ಸ್ಥಳಗಳಲ್ಲಿ ಕನ್ನಡ ದಿನಪತ್ರಿಕೆಗಳನ್ನು ಸುಟ್ಟು ಹಾಕುತ್ತಿರುವ ಮರಾಠಿಗರ ಕ್ರಮವನ್ನು ಚಿಕ್ಕೋಡಿಯ ಎಲ್ಲ ಸಂಘಟನೆಗಳು ಚಿಂಚಣಿ ಶ್ರೀಗಳ ನೇತೃತ್ವದಲ್ಲಿ ಬಲವಾಗಿ ಖಂಡಿಸಿವೆ. ಮಹಾಜನ ವರದಿ ಕುರಿತು ಕೇಂದ್ರಸರಕಾರ ಅನುಸರಿಸುತ್ತಿರುವ ದ್ವಿಮುಖ ನೀತಿಯನ್ನು ಚಿಂಚಣಿ ಶ್ರೀಗಳ ನೇತೃತ್ವದಲ್ಲಿ ಈ ಬಳಗವು ಖಂಡಿಸಿದೆ (೨೦೦೬). "ಮಹಾಜನ ವರದಿಯನ್ನು ಯಥಾವತ್ತಾಗಿ ಅನುಸರಿಸುವಲ್ಲಿ ಕೇಂದ್ರ ಸರಕಾರ ಅನುಸರಿಸುತ್ತಿರುವ ರೀತಿ ಸರಿಯಾದುದ್ದಲ್ಲ. ಕೇಂದ್ರ ಸರಕಾರ ಯಾವುದೇ ರಾಜ್ಯದ ಒತ್ತಡಕ್ಕೆ ಮಣಿಯದೇ ಎರಡು ರಾಜ್ಯಗಳ ಹಿತಾಸಕ್ತಿಯ ದೃಷ್ಟಿಯಿಂದ ಮಹಾಜನವರದಿ ಅನುಷ್ಠಾನಕ್ಕೆ ಅಂತಿಮಗೊಳಿಸಬೇಕು. ಹಾಗೂ ಸರ್ವೋಚ್ಚ ನ್ಯಾಯಾಲಯಕ್ಕೆ ಸೂಕ್ತ ದಾಖಲೆಗಳನ್ನು ಸಲ್ಲಿಸಿ ಕರ್ನಾಟಕಕ್ಕೆ ನ್ಯಾಯವದಗಿಸಬೇಕು"[೨೩] ಎಂದು ಆಗ್ರಹಿಸಿದೆ.

ಬೆಳಗಾವಿಯನ್ನು ಎರಡನೆಯ ರಾಜಧಾನಿಯನ್ನಾಗಿ ಘೋಷಿಸಿರುವುದನ್ನು ಬೆಂಬಲಿಸಿ ಸರಕಾರವು ಈ ನಿಲುವಿನಿಂದ ಹಿಂದೆ ಸರಿಯಬಾರದೆಂದು ಒತ್ತಾಯಮಾಡಿದೆ. ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ, ಕಾವೇರಿ ನದಿವಿವಾದ, ಕಳಸಾಬಂಡೂರಿ ನಾಲಾಯೋಜನೆ ಮುಂತಾದ ಹೋರಾಟಗಳಲ್ಲಿ ಗಡಿಕನ್ನಡಿಗರ ಬಳಗ ಪಾಲ್ಗೊಂಡಿದೆ.

**ಇತರ ಕಾರ್ಯಗಳು:**

ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆಯು ಪ್ರಕಟಿಸಿದ ಎಲ್ಲ ಪುಸ್ತಕಗಳನ್ನು ಬಿಡುಗಡೆಗೊಳಿಸುವುದು ಮತ್ತು ಕರ್ನಾಟಕದ ವಿವಿಧ ಭಾಗದ ಸಾಧಕರನ್ನು ಗುರುತಿಸಿ ಗೌರವಿಸುವ ಕಾರ್ಯ ನಿಜಕ್ಕೂ ಮಹತ್ವದ ಕಾರ್ಯ. ಇಂಥ ಕಾರ್ಯವನ್ನು ಗಡಿಕನ್ನಡಿಗರ ಬಳಗವು ನಿರಂತರವಾಗಿ ಮುಂದುವರೆಸಿಕೊಂಡು ಬರುತ್ತಿದೆ.

ಕನ್ನಡ ನಾಟಕಗಳನ್ನು ಪ್ರದರ್ಶಿಸುವದರ ಮೂಲಕ ಕನ್ನಡ ರಂಗಭೂಮಿಯನ್ನು (೨೦೦೬) ಈ ಭಾಗದಲ್ಲಿ ಪರಿಚಯಿಸುತ್ತಿದೆ. ತಮಾಷಾ ಮತ್ತು ಲಾವಣಿಗಳ ಪ್ರಭಾವದಲ್ಲಿರುವ ಈ ಪ್ರದೇಶದಲ್ಲಿ ಕನ್ನಡ ನಾಟಕಗಳನ್ನು ಪ್ರದರ್ಶಿಸುವ ಕಾರ್ಯ ಒಂದು ರೀತಿಯಲ್ಲಿ ಕನ್ನಡ ಜಾಗೃತಿಯೇ ಹೌದು. ಈ ರೀತಿಯಾದ ಕನ್ನಡ ನಾಡು-ನುಡಿ ಪರವಾದ ಕಾರ್ಯಕ್ರಮದೊಂದಿಗೆ ಉಚಿತ ಆರೋಗ್ಯ ತಪಾಸಣಾ ಶಿಬಿರ (೨೦೦೬), ಯೋಗ ಶಿಬಿರ, ಉಚಿತ ದಂತಚಿಕಿತ್ಸಾ ಶಿಬಿರ (೨೦೦೬), ವನಮಹೋತ್ಸವ ಕಾರ್ಯಕ್ರಮ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು (೨೦೦೬) ಹಮ್ಮಿಕೊಳ್ಳುವುದರ ಮೂಲಕ ಗಡಿಕನ್ನಡಿಗರ ಸಾಮಾಜಿಕ, ಸಾಂಸ್ಕೃತಿಕ ಬದುಕಿಗೆ ಈ ಬಳಗವು ಊರುಗೋಲಾಗಿದೆ.

ರಾಜ್ಯೋತ್ಸವ, ವಿವಿಧ ಸ್ಪರ್ಧೆಗಳು ಮತ್ತು ಪುಸ್ತಕ ಬಿಡುಗಡೆ ಕಾರ್ಯಕ್ರಮಗಳಿಂದಾಗಿ ಗಡಿಭಾಗದ ಎಲ್ಲ ಜನರಲ್ಲಿ ಕನ್ನಡ ಪ್ರೀತಿಯನ್ನು ಮತ್ತು ಅಭಿಮಾನವನ್ನು ತುಂಬುವಲ್ಲಿ ಈ ಬಳಗ ವಿಶೇಷವಾದ ಕಾರ್ಯಗಳನ್ನು ಮಾಡುತ್ತಿದೆ.

ಈ ತೆರನಾಗಿ ಗಡಿಕನ್ನಡಿಗರ ಬಳಗವು ಗಡಿಭಾಗದಲ್ಲಿ ಸ್ಥಾಪನೆಗೊಂಡು ಅಲ್ಲಮಪ್ರಭು ಸ್ವಾಮಿಗಳ ನೇತೃತ್ವದಲ್ಲಿ ವಿಭಿನ್ನ ರೀತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದೆ. ಕರ್ನಾಟಕದ ಯಾವದೇ ಮೂಲೆಯಲ್ಲಿ ಕನ್ನಡ ನಾಡು-ನುಡಿಗೆ ಧಕ್ಕೆಯುಂಟಾದಾಗ ಬಲವಾಗಿ ಅದನ್ನು ಖಂಡಿಸುತ್ತದೆ. ರಾಜ್ಯೋತ್ಸವವನ್ನು ವಿಶಿಷ್ಟ ರೀತಿಯಲ್ಲಿ ಆಚರಿಸುವದರ ಮೂಲಕ ಕನ್ನಡ ಪ್ರೇಮವನ್ನು ಮತ್ತು ಕಾಳಜಿಯನ್ನು ಬಿಂಬಿಸುತ್ತಿದೆ. ಮರಾಠೀಮಯವಾಗಿದ್ದ ಚಿಕ್ಕೋಡಿಯ ಗಡಿಗ್ರಾಮಗಳಲ್ಲಿ ನಾಡು-ನುಡಿ ಬಗೆಗೆ ಅಭಿಮಾನದ ಭಾವವನ್ನು ಅಂಕುರಗೊಳಿಸುತ್ತಿದೆ. ಮರಾಠಿಗರು ಅಚ್ಚರಿಗೊಳ್ಳುವಂತೆ ಈ ಬಳಗವು ನಿರಂತರವಾಗಿ ಕನ್ನಡ ವಾತಾವರಣವನ್ನು ನಿರ್ಮಿಸುತ್ತ ಮುನ್ನಡೆಯುತ್ತಿದೆ. ವಿದ್ಯಾರ್ಥಿಗಳಿಗೆ ವಿಭಿನ್ನ ಸ್ಪರ್ಧೆಗಳನ್ನು ಏರ್ಪಡಿಸುವುದರ ಮೂಲಕ ಅವರಲ್ಲಿ ಕನ್ನಡ ಅಭಿಮಾನವನ್ನು ಜಾಗೃತಗೊಳಿಸುತ್ತಿದೆ. ಗಡಿಕನ್ನಡಿಗರ ಬಳಗವು ಈ ಭಾಗದ ಕನ್ನಡಿಗರಿಗೆ ಉತ್ತೇಜನಕಾರಿಯಾಗಿದೆ. ಈ ಎಲ್ಲ ಕಾರ್ಯಗಳಿಗೆ ಅಲ್ಲಮಪ್ರಭು ಸ್ವಾಮಿಗಳು ದಿಗ್ದರ್ಶಕರಾಗಿದ್ದಾರೆ. ೧೯೯೭ರಿಂದ ಇಲ್ಲಿಯ

ವರೆಗೆ ಇಡಿ ಕರ್ನಾಟಕ ರಾಜ್ಯವೇ ಚಿಂಚಣಿಯಲ್ಲಿ ನಡೆಯುವ ರಾಜ್ಯೋತ್ಸವ ಕಾರ್ಯಕ್ರಮವನ್ನು ನೋಡಿ, ಕೇಳಿ ಬೆರಗಾಗುವಂತೆ ಈ ಬಳಗವು ಅಚ್ಚುಕಟ್ಟಾಗಿ ರಾಜ್ಯೋತ್ಸವವನ್ನು ಆಚರಿಸುತ್ತಿದೆ.

ಒಟ್ಟಿನಲ್ಲಿ ಗಡಿಕನ್ನಡಿಗರ ಬಳಗವು ಪುಸ್ತಕ ಬಿಡುಗಡೆ, ರಾಜ್ಯೋತ್ಸವ ಆಚರಣೆ, ಸಭೆ ಸಮಾರಂಭ, ಸ್ಪರ್ಧೆ, ಹೋರಾಟ, ಸಾಂಸ್ಕೃತಿಕ ಕಾರ್ಯಕ್ರಮ, ವನಮಹೋತ್ಸವ ಕಾರ್ಯಕ್ರಮ ಮುಂತಾದ ಕನ್ನಡಪರ ಕಾರ್ಯಗಳಲ್ಲಿ ತನ್ನನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಿದೆ. ರಾಜ್ಯದ ಕನ್ನಡಪರ ಸಂಘಟನೆಗಳ ಪಟ್ಟಿಯಲ್ಲಿ ಚಿಂಚಣಿ ಗಡಿಕನ್ನಡಿಗರ ಬಳಗವು ತನ್ನದೇ ಆದ ಒಂದು ವಿಶಿಷ್ಟವಾದ ಸ್ಥಾನವನ್ನು ಪಡೆದುಕೊಂಡಿದೆ.

**ಅಡಿ ಟಿಪ್ಪಣಿಗಳು:**

೧. ಸೀಮೆ-ಚಂದ್ರಕಾಂತ ಪೋಕಳೆ, ಅನಿಲ ಕಮತೆ, ಪು. ೩.
೨. ಅದೇ ಪು. ೩.
೩. ಅದೇ ಪು. ೫.
೪. ಕುಂ. ವೀ. ಯವರ ಪತ್ರ
೫. ಡಾ. ಎಂ.ಎಂ. ಕಲಬುರ್ಗಿಯವರ ಪತ್ರ
೬. ರತ್ನಶೀಲ ಗುರೆಡ್ಡಿಯವರ ಪತ್ರ
೭. ಸಂಯುಕ್ತ ಕರ್ನಾಟಕ ದಿನಪತ್ರಿಕೆ, ದಿ: ೧೦.೧೧.೨೦೦೦
೮. ಪ್ರಜಾ ವಾಣಿ ದಿನಪತ್ರಿಕೆ, ದಿ: ೦೪.೧೧.೨೦೦೧
೯. ಅದೇ, ದಿ: ೦೪.೧೧.೨೦೦೧
೧೦. ಕನ್ನಡ ಪ್ರಭ ದಿನಪತ್ರಿಕೆ, ದಿ: ೦೮.೧೧.೨೦೦೨
೧೧. ಹಸಿರು ಕ್ರಾಂತಿ ದಿನಪತ್ರಿಕೆ, ದಿ: ೦೬.೧೧.೨೦೦೨
೧೨. ಪ್ರಜಾ ವಾಣಿ ದಿನಪತ್ರಿಕೆ, ದಿ: ೦೬.೧೧.೨೦೦೪
೧೩. ಕರ್ನಾಟಕ ಟಾಯಿಮ್ಸ ದಿನಪತ್ರಿಕೆ, ದಿ: ೦೭.೧೧.೨೦೦೪
೧೪. ವಿಜಯ ಕರ್ನಾಟಕ ದಿನಪತ್ರಿಕೆ, ದಿ: ೦೪.೧೧.೨೦೦೫
೧೫. ಪ್ರಜಾ ವಾಣಿ ದಿನಪತ್ರಿಕೆ, ದಿ: ೦೭.೧೧.೨೦೦೫
೧೬. ಸಂಯುಕ್ತ ಕರ್ನಾಟಕ ದಿನಪತ್ರಿಕೆ, ದಿ: ೦೩.೧೧.೨೦೦೬
೧೭. ಕನ್ನಡಮ್ಮ ದಿನಪತ್ರಿಕೆ, ದಿ: ೦೪.೧೧.೨೦೦೬
೧೮. ಕನ್ನಡ ಪ್ರಭ ದಿನಪತ್ರಿಕೆ, ದಿ: ೦೩.೧೧.೨೦೦೭
೧೯. ವಿಜಯ ಕರ್ನಾಟಕ ದಿನಪತ್ರಿಕೆ, ದಿ: ೦೩.೧೧.೨೦೦೭
೨೦. ಕನ್ನಡ ಪ್ರಭ ದಿನಪತ್ರಿಕೆ, ದಿ: ೨೮.೦೮.೨೦೦೦
೨೧. ಕರ್ನಾಟಕ ಟಾಯಿಮ್ಸ ದಿನಪತ್ರಿಕೆ, ದಿ: ೧೩.೧೦.೨೦೦೪
೨೨. ಚಿಕ್ಕೋಡಿ ತಹಶೀಲದಾರರಿಗೆ ನೀಡಿದ ಮನವಿ ಪತ್ರ. ದಿ: ೧೮.೧೦.೨೦೦೫
೨೩. ಸಂಯುಕ್ತ ಕರ್ನಾಟಕ ದಿನಪತ್ರಿಕೆ, ದಿ: ೧೫.೦೯.೨೦೦೬

ಅಧ್ಯಾಯ ೬

# ಅಧ್ಯಯನದ ಫಲಶೃತಿ

ಚಿಂಚಣಿ ಮಠವು ಕರ್ನಾಟಕ ಮತ್ತು ಮಹಾರಾಷ್ಟ್ರದ ಗಡಿಭಾಗದಲ್ಲಿದೆ. ಇದು ಚಿಕ್ಕೋಡಿ ಪರಿಸರದಲ್ಲಿ ಕನ್ನಡ ನಾಡು-ನುಡಿಪರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ನಾಡಿನಲ್ಲಿಯೇ 'ಕನ್ನಡ ಮಠ' ವೆಂದು ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಜಾತಿ-ಮತಗಳ ಭೇದವನ್ನು ಮಾಡದೆ ಎಲ್ಲ ಧರ್ಮಿಯರ ಸಹಕಾರದಿಂದ 'ಕನ್ನಡ ಜಾಗೃತಿ'ಗಾಗಿ ದುಡಿಯುತ್ತಿದೆ. ಕಳೆದ ಒಂದು ದಶಕದಿಂದ ವಿಭಿನ್ನ ರೀತಿಯ ಕನ್ನಡ ಕಾರ್ಯಕ್ರಮಗಳನ್ನು ಆಯೋಜಿಸುತ್ತಾ ಬಂದಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

ಮಠದ ಮುಖ್ಯವಾದ ಕನ್ನಡ ಕಾರ್ಯಗಳಲ್ಲಿ ಕನ್ನಡ ರಾಜ್ಯೋತ್ಸವದ ವಿಶಿಷ್ಟವಾದ ಆಚರಣೆ ಒಂದಾಗಿದೆ. ನಾಡಿನ ಬೇರೆ ಬೇರೆ ವಿದ್ವಾಂಸರುಗಳು ಈ ಮಠದ ರಾಜ್ಯೋತ್ಸವದ ಕಾರ್ಯಕ್ರಮಕ್ಕೆ ಬಂದು ಕನ್ನಡದ ಸ್ಥಿತಿ-ಗತಿ ಮತ್ತು ಭಾಷಾಭಿಮಾನಕ್ಕೆ ಪೂರಕವಾದ ಮಾತುಗಳನ್ನು ಹೇಳಿದ್ದಾರೆ. ಇದರ ಪರಿಣಾಮ ಗಡಿಭಾಗದ ಜನತೆಯ ಮೇಲೆ ಆಗಿರುವುದು ಗೊತ್ತಾಗುತ್ತದೆ. ಒಂದು ಕಾಲದಲ್ಲಿ ಕನ್ನಡವನ್ನು ಮಾತನಾಡಲು ಹಿಂಜರಿಯುತ್ತಿದ್ದ ಇಲ್ಲಿಯ ಜನ ಇಂದು ನಿರ್ಭಯವಾಗಿ ಕನ್ನಡವನ್ನು ಮಾತನಾಡುತ್ತಿರುವುದು ಕಂಡುಬರುತ್ತದೆ.

ರಾಜ್ಯೋತ್ಸವವೆಂದರೆ ಇಲ್ಲಿ ನಾಡು-ನುಡಿಯ ಜಾತ್ರೆಯೆಂಬ ರೀತಿಯಲ್ಲಿ ಜರುಗುತ್ತವೆ. ಶ್ರೀ ಮಠವು ವರ್ಷಕ್ಕೆ ಎರಡು ಉತ್ಸವಗಳನ್ನು ಅದ್ದೂರಿಯಾಗಿ ಆಚರಿಸುತ್ತದೆ. ಒಂದು ಅಲ್ಲಮಪ್ರಭು ಜಯಂತಿಯಾದರೆ, ಇನ್ನೊಂದು ಕನ್ನಡ ರಾಜ್ಯೋತ್ಸವ ಆಚರಣೆ. ಕನ್ನಡ ಸಾಹಿತ್ಯಕ್ಕೆ ವಿಶೇಷವಾದ ಸೇವೆಸಲ್ಲಿಸಿದ ಅಲ್ಲಮಪ್ರಭುದೇವರ ಅನುಷ್ಠಾನದ ಸ್ಥಳ ಇದಾಗಿರುವುದರಿಂದ ಒಂದು ಮಹತ್ವ ಒದಗಿದೆ. ರಾಜ್ಯೋತ್ಸವದ ವಿಶೇಷವಾದ ಆಚರಣೆಗಳು ಈ ಮಠದ ಒಂದು ವಿಶಿಷ್ಟತೆಯಾಗಿದೆ. ಚಿಂಚಣಿ ಮಠವು ಧಾರ್ಮಿಕ ಕಾರ್ಯಗಳಿಗಿಂತ ಹೆಚ್ಚಾಗಿ ಕನ್ನಡ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿರುವುದು ಕಂಡುಬರುತ್ತದೆ. ಕಳೆದ ಒಂದು ದಶಕದಿಂದ ಆಚರಿಸುತ್ತಿರುವ ರಾಜ್ಯೋತ್ಸವಗಳು ನಾಡಿನ ಎಲ್ಲ ಭಾಗದ ಸಾಹಿತಿ, ವಿದ್ವಾಂಸರ, ಕಲಾವಿದರ, ರಾಜಕಾರಣಿಗಳ ಹಾಗೂ ಮಠಾಧೀಶರ ಮೆಚ್ಚುಗೆಯ ಮಾತುಗಳು ಮಠದ ಕನ್ನಡತನಕ್ಕೆ ಸಾಕ್ಷಿಗಳಾಗಿವೆ. ಬೇರೆ ಕಡೆಗೆ ಆಚರಿಸುವ ರಾಜ್ಯೋತ್ಸವಗಳಿಗಿಂತಲೂ ಈ ಮಠದ ರಾಜ್ಯೋತ್ಸವ ಆಚರಣೆಗಳು ವಿಭಿನ್ನವಾಗಿ ಮತ್ತು ವೈವಿಧ್ಯಮಯವಾಗಿ ಗೋಚರಿಸುತ್ತವೆ. ರಾಜ್ಯೋತ್ಸವಗಳನ್ನು ಹೇಗೆ ವಿನೂತನ

ಮಾದರಿಯಲ್ಲಿ ಆಚರಿಸಬೇಕೆಂಬುದಕ್ಕೆ ಪ್ರತಿ ವರ್ಷ ನವ್ವೆಂಬರ ೨ರಂದು ಚಿಂಚಣಿ ಮಠದಲ್ಲಿ ನಡೆಯುವ ರಾಜ್ಯೋತ್ಸವಗಳು ನಿದರ್ಶನಗಳಾಗಿವೆ.

ಪ್ರತಿ ರಾಜ್ಯೋತ್ಸವದಲ್ಲಿ ಬಿಡುಗಡೆಗೊಳ್ಳುವ ಕನ್ನಡಪರ ಚಿಂತನೆಯನ್ನು ಒಳಗೊಂಡ ಕೃತಿಗಳು ರಾಜ್ಯೋತ್ಸವದ ಒಂದು ವಿಶೇಷತೆಯಾಗಿದೆ. ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿದ ವ್ಯಕ್ತಿಗಳನ್ನು ಗುರುತಿಸಿ ಸನ್ಮಾನಿಸುವುದುಸಹ ಮಠದ ರಾಜ್ಯೋತ್ಸವದ ಒಂದು ಭಾಗವಾಗಿದೆ. ಕನ್ನಡಜಾಗೃತಿ ಎಂದರೆ ಕೇವಲ ಭಾಷಾಸಮಸ್ಯೆ ಮತ್ತು ಗಡಿಸಮಸ್ಯೆಯ ಬಗ್ಗೆ ಅರಿವನ್ನುಂಟುಮಾಡುವುದಲ್ಲ. ಕನ್ನಡದ ಸಾಧಕರನ್ನು ಗೌರವಿಸುವುದು ಸಹ ಕನ್ನಡಜಾಗೃತಿ ಎಂಬುದು ಮಠದ ಕಾರ್ಯಚಟುವಟಿಕೆಗಳಿಂದ ತಿಳಿದುಬರುತ್ತದೆ.

ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆಯ 'ಕನ್ನಡಜಾಗೃತಿ ಪುಸ್ತಕಮಾಲೆ'ಯಲ್ಲಿ ಪ್ರಕಟಗೊಳ್ಳುತ್ತಿರುವ ಕೃತಿಗಳಿಗೆ ಒಂದು ಮಹತ್ವವಿದೆ. ಏಕೆಂದರೆ ಇದುವರೆಗೆ ಈ ಪ್ರಕಾಶನದಿಂದ ಯಾವುದೇ ಧಾರ್ಮಿಕ ಕೃತಿಗಳು ಪ್ರಕಾಶನಗೊಂಡಿಲ್ಲ. ಇದುವರೆಗೆ ೨೩ ಕೃತಿಗಳು ಪ್ರಕಟಗೊಂಡಿದ್ದು, ಅವುಗಳೆಲ್ಲವು ಕನ್ನಡ ನಾಡಿನ ಭಾಷೆ, ಸಾಹಿತ್ಯ ಮತ್ತು ಸಾಂಸ್ಕೃತಿಕ ಅಂಶಗಳನ್ನು ಒಳಗೊಂಡಿವೆ. ಈ ಎಲ್ಲ ಗ್ರಂಥಗಳು ಗ್ರಂಥ ದಾನಿಗಳ ಸಹಾಯದೊಂದಿಗೆ ಪ್ರಕಾಶನಗೊಳ್ಳುತ್ತಿರುವುದು ಜನರಲ್ಲಿರುವ ಪುಸ್ತಕ ದಾಸೋಹ ಭಾವನೆಯನ್ನು ಬಿಂಬಿಸುತ್ತವೆ. ಪ್ರಸ್ತಕ ಪ್ರಕಟನೆಯನ್ನು ಒಂದು ವ್ಯವಹಾರವನ್ನಾಗಿ ಮಾಡಿಕೊಳ್ಳದೆ ಇದೊಂದು ಕನ್ನಡದ ಸೇವೆಯೆಂಬ ಮನೋಧರ್ಮವನ್ನು ಈ ಪ್ರಕಾಶನ ಸಂಸ್ಥೆಯು ತಿಳಿದುಕೊಂಡು ಕಾರ್ಯಪ್ರವೃತ್ತವಾಗಿರುವುದು ತಿಳಿದುಬರುತ್ತದೆ.

ಪುಸ್ತಕ ಬಿಡುಗಡೆ ಕೇವಲ ಸಭೆಸಮಾರಂಭ ಮತ್ತು ಉತ್ಸವಗಳಿಗೆ ಸೀಮಿತವಾಗಿಲ್ಲ. ಮಕ್ಕಳ ಜವಳದ ಸಂದರ್ಭ, ಗೃಹಪ್ರವೇಶ ಸಂದರ್ಭ ಮುಂತಾದ ವಿವಿಧ ಸಂದರ್ಭಗಳಲ್ಲಿ ಪುಸ್ತಕ ಬಿಡುಗಡೆಗೊಳಿಸಿ ನೂತನ ಪ್ರಯೋಗಗಳನ್ನು ಶ್ರೀ ಮಠವು ಮಾಡುತ್ತಿರುವುದು ಗೋಚರಿಸುತ್ತದೆ. ಇದೊಂದು ವಿಶಿಷ್ಟವಾದ ಸಂಗತಿಯಾಗಿದೆ.

ಗಡಿಕನ್ನಡಿಗರ ಬಳಗದ ಕಾರ್ಯಚಟುವಟಿಕೆಗಳಾದ ರಾಜ್ಯೋತ್ಸವ ಆಚರಣೆ, ಪುಸ್ತಕ ಬಿಡುಗಡೆ, ಶಾಲಾ ಮಕ್ಕಳಿಗೆ ಮತ್ತು ಯುವಕರಿಗೆ ವಿಭಿನ್ನ ಕನ್ನಡಪರ ಸ್ಪರ್ಧೆಗಳು, ಸಾಂಸ್ಕೃತಿಕ ಕಾರ್ಯಕ್ರಮಗಳು ಮತ್ತು ಹೋರಾಟಗಳು ಗಡಿಭಾಗದ ಕನ್ನಡ ಜಾಗೃತಿಗೆ ಪ್ರೇರಕವಾಗಿವೆ. ಯುವಜನತೆಯನ್ನು ಸಂಘಟಿಸುವ ಮತ್ತು ಕನ್ನಡಪರವಾಗಿ ಹೋರಾಟವನ್ನು ಮಾಡುವ ಮನೋಭಾವನೆಯನ್ನು ಬೆಳೆಸಲು ಈ ಬಳಗವು ಕಾರಣವಾಗಿದೆ. ಇದರಿಂದಾಗಿ ಗಡಿಭಾಗದಲ್ಲಿ ಇಂದು ಹಲವಾರು ಕನ್ನಡ

ಸಂಘಟನೆಗಳು ಹುಟ್ಟಿಕೊಂಡು ಕನ್ನಡಜಾಗೃತಿಗಾಗಿ ಶ್ರಮಿಸುತ್ತಿವೆ. ಈ ಅಂಶಗಳು ಅಧ್ಯಯನದಿಂದಾಗಿ ತಿಳಿದುಬರುತ್ತದೆ.

'ಬಾಳಿನಬುತ್ತಿ ಕಲಿಕಾ ಕೇಂದ್ರ'ವು ಸುಮಾರು ೧೦ ವರ್ಷಗಳ ಕಾಲ ಮಠದ ಒಂದು ಸಂಸ್ಥೆಯಾಗಿ ಕಾರ್ಯನಿರ್ವಹಿಸಿದೆ. ಅದು ಮಕ್ಕಳ ವಿದ್ಯಾರ್ಜನೆಗೆ ಸಹಾಯವನ್ನು ನೀಡಿರುವುದು ತಿಳಿದುಬರುತ್ತದೆ. ಮಕ್ಕಳಲ್ಲಿ ಐಕ್ಯತೆಯನ್ನು ಮೂಡಿಸಿ 'ನಾವು ಕನ್ನಡಿಗರು' ಎಂಬುದನ್ನು ತಿಳಿಸುವ ಹಲವಾರು ಕಾರ್ಯಗಳನ್ನು ಈ ಕೇಂದ್ರ ಮಾಡಿದೆ. ಕನ್ನಡ ಸಾಹಿತ್ಯ, ಸಂಸ್ಕೃತಿ ಮತ್ತು ಚರಿತ್ರೆಯನ್ನು ಮಕ್ಕಳಿಗೆ ತಿಳಿಸುವ ಕಾರ್ಯದಲ್ಲಿ ಈ ಕೇಂದ್ರವು ಪ್ರಮುಖ ಪಾತ್ರ ನಿರ್ವಹಿಸಿದ್ದು ಅಧ್ಯಯನದಿಂದ ತಿಳಿದುಬರುತ್ತದೆ. ಧಾರವಾಡದ ಚಿಲಿಪಿಲಿಪ್ರಕಾಶನದ 'ಶಿಕ್ಷಣ ಸಿರಿ ಪ್ರಶಸ್ತಿ'ಯು ಈ ಕೇಂದ್ರದ ಕಾರ್ಯಗಳಿಗೆ ಸಂದ ಗೌರವವಾಗಿದೆ.

ಗಡಿಕನ್ನಡಿಗರ ಬಳಗವು ಗಡಿಭಾಗದಲ್ಲಿ ಕನ್ನಡ ವಾತಾವರಣ ನಿರ್ಮಿಸುವಲ್ಲಿ ಪ್ರಮುಖ ಪಾತ್ರವಹಿಸಿದ್ದು ಅಧ್ಯಯನದಿಂದ ತಿಳಿಯುತ್ತದೆ. ತಾಂತ್ರಿಕ ಯುಗದಲ್ಲಿ ಯುವಕರಿಗೆ ನಾಡು-ನುಡಿ, ಸಂಸ್ಕೃತಿಯ ಬಗೆಗೆ ವಿಶೇಷ ಅಭಿಮಾನವನ್ನು ಮೂಡಿಸುವಲ್ಲಿ ಶ್ರೀ ಮಠದ ಅಧೀನದಲ್ಲಿ ನಡೆಯುವ ಗಡಿಕನ್ನಡಿಗರ ಬಳಗವು ಒಂದು ಮಾದರಿಯಾಗಿದೆ. ಸ್ವಾಮೀಜಿಯವರು ಮಾಡುತ್ತಿರುವ ಕನ್ನಡ ಸಂಸ್ಕೃತಿ ಮತ್ತು ನುಡಿಪರವಾದ ಕಾರ್ಯಗಳು ಗಡಿಜನತೆಯನ್ನು ಜಾಗೃತಗೊಳಿಸುತ್ತಿವೆ. ಈ ಬಳಗವು ಕೈಗೊಳ್ಳುತ್ತಿರುವ ಹೋರಾಟಗಳು ಮಹಾಜನ ವರದಿ, ಕನ್ನಡ ಶಾಸ್ತ್ರೀಯ ಸ್ಥಾನಮಾನ ಇನ್ನೂ ಮುಂತಾದ ವಿಷಯಗಳ ಬಗೆಗಿನ ತಿಳುವಳಿಕೆಯನ್ನು ಜನಸಾಮಾನ್ಯರಿಗೆ ನೀಡುವಲ್ಲಿ ಮುಖ್ಯ ಪಾತ್ರವಹಿಸಿವೆ. ನಾಡು-ನುಡಿಯ ಜೊತೆಗೆ ಗಡಿ ಭಾಗದಲ್ಲಿ ಕನ್ನಡ ಸಂಸ್ಕೃತಿಯನ್ನು ಪಸರಿಸುವಲ್ಲಿ ಈ ಬಳಗವು ಗಮನಾರ್ಹವಾದ ಕಾರ್ಯವನ್ನು ಮಾಡುತ್ತಿರುವುದನ್ನು ಈ ಅಧ್ಯಯನ ತೋರಿಸಿಕೊಡುತ್ತದೆ. ವಿವಿಧ ಜಾನಪದ ಸ್ಪರ್ಧೆಗಳು, ರಂಗೋಲಿಯ ಸ್ಪರ್ಧೆ, ನೃತ್ಯರೂಪಕ ಪ್ರದರ್ಶನ, ಕನ್ನಡ ನಾಟಕಗಳ ಪ್ರದರ್ಶನ ಇವೆಲ್ಲವು ಬಳಗದ ಕನ್ನಡ ಸಂಸ್ಕೃತಿಯ ಕಾಳಜಿಯನ್ನು ಬಿಂಬಿಸುತ್ತವೆ. ಇದರಿಂದ ಗಡಿಕನ್ನಡಿಗರ ಬಳಗವು ಸಾಹಿತ್ಯ, ಸಂಸ್ಕೃತಿ, ನಾಡು-ನುಡಿ, ನೆಲ-ಜಲಗಳ ರಕ್ಷಣೆಯಲ್ಲಿ ಪ್ರಮುಖವಾದ ಕಾರ್ಯಗಳನ್ನು ಹಮ್ಮಿಕೊಳ್ಳುತ್ತಾ ಗಡಿಯಲ್ಲಿ ಕಳೆದ ೧೦ ವರ್ಷಗಳಿಂದ ಕನ್ನಡ ಜಾಗೃತಿಯನ್ನು ಮಾಡುತ್ತಿರುವುದು ಅಧ್ಯಯನದ ಮೂಲಕ ಸ್ಪಷ್ಟವಾಗುತ್ತದೆ. ಗಡಿಭಾಗದ ಕನ್ನಡ ಸಂಘಟನೆಗಳು ಯಾವ ರೀತಿಯಾಗಿ ತಮ್ಮ ಕಾರ್ಯ ಚಟುವಟಿಕೆಗಳನ್ನು ರೂಪಿಸಿಕೊಳ್ಳಬೇಕೆಂಬುದಕ್ಕೆ ಈ ಬಳಗವು ಒಂದು ನಿದರ್ಶನವಾಗಿದೆ. ಈ ಅಂಶ ಅಧ್ಯಯನದಿಂದ ಕಂಡುಬರುತ್ತದೆ.

ಅಲ್ಲಮಪ್ರಭು ಸ್ವಾಮಿಗಳು ಶ್ರೀ ಮಠದ ಪಟ್ಟಾಧಿಕಾರವನ್ನು ವಹಿಸಿಕೊಂಡಾಗಿನಿಂದ ಚಿಂಚಣಿ ಹಾಗೂ ಸುತ್ತಮುತ್ತಲಿನ ಪರಿಸರದಲ್ಲಿ ಕನ್ನಡದ

ಅಲೆಗಳು ಏಳತೊಡಗಿವೆ. ಈ ಅಲೆಗಳು ಗಡಿಯಲ್ಲಿಯ ನಿರಭಿಮಾನಿ ಕನ್ನಡಿಗರಿಗೆ ಕನ್ನಡ ಜಾಗೃತಿಯನ್ನು ಮೂಡಿಸಲು ಪೂರಕವಾಗಿವೆ. ರಾಜ್ಯೋತ್ಸವ ಎಂದರೇನು? ಎಂಬುದನ್ನು ಅರಿಯದ ಖಡಕಲಾಟದ ಜನತೆಗೆ ರಾಜ್ಯೋತ್ಸವದ ಮಹತ್ವವನ್ನು ತಿಳಿಸಿ, ಅವರಿಗೆ ರಾಜ್ಯೋತ್ಸವ ಆಚರಣೆ ಮಾಡುವಂತೆ ಪ್ರೇರೇಪಿಸಿದುದು ಸ್ವಾಮೀಜಿಯವರು ಮಾಡಿದ ಒಂದು ಪವಾಡವಾಗಿದೆ. ಇಂತಹ ವಿಶಿಷ್ಟ ಕನ್ನಡ ಜಾಗೃತಿಯ ಅಂಶಗಳು ಅಧ್ಯಯನದ ಮೂಲಕ ಅನಾವರಣಗೊಳ್ಳುತ್ತವೆ.

ಚಿಕ್ಕೋಡಿ, ನಿಪ್ಪಾಣಿ ಹಾಗೂ ಅಥಣಿಗಳಲ್ಲಿ ನಡೆದ ಗಡಿನಾಡ ಉತ್ಸವಗಳು, ಅವುಗಳಲ್ಲಿ ಚಿಂಚಣಿ ಶ್ರೀಗಳು ನಿರ್ವಹಿಸಿದ ಕಾರ್ಯಗಳು ಮತ್ತು ವ್ಯಕ್ತಪಡಿಸಿದ ಕನ್ನಡಪರವಾದ ವಿಚಾರಗಳು ಜನತೆಯನ್ನು ಎಚ್ಚರಗೊಳಿಸಿವೆ. ಇಂತಹ ಅನುಪಮವಾದ ಗಡಿಭಾಗದ ಕನ್ನಡ ಉತ್ಸವಗಳಲ್ಲಿ ಮತ್ತು ಹೋರಾಟಗಳಲ್ಲಿ ಪಾಲ್ಗೊಳ್ಳುವ ಮೂಲಕ ಚಿಂಚಣಿ ಸ್ವಾಮಿಗಳು 'ಕನ್ನಡ ಸ್ವಾಮಿಗಳು' ಎಂದು ಜನಪ್ರಿಯರಾಗಿದ್ದಾರೆ. ಈ ಅಂಶ ಅಧ್ಯಯನದಿಂದ ಮನದಟ್ಟಾಗುತ್ತದೆ.

ನಡುನಾಡಿನ ಶಿರೋಳದಿಂದ ಗಡಿನಾಡಿನ ಚಿಂಚಣಿಗೆ ಬಂದ ಶ್ರೀಗಳು ಧಾರ್ಮಿಕ ಕಾರ್ಯಕ್ಕಿಂತ ಹೆಚ್ಚಾಗಿ ನಾಡಧರ್ಮದ ಕಾರ್ಯಗಳನ್ನು ಮಾಡಿದುದು ಅಧ್ಯಯನದಲ್ಲಿ ಕಂಡು ಬರುತ್ತದೆ. 'ಕನ್ನಡ ಜಗದ್ಗುರುಗಳು' ಎಂದು ಪ್ರಸಿದ್ಧಿ ಪಡೆದ ಗದಗದ ಜ.ಡಾ.ಸಿದ್ಧಲಿಂಗ ಮಹಾಸ್ವಾಮಿಗಳು ಹಾಕಿಕೊಟ್ಟ ಮಾರ್ಗದಲ್ಲಿ 'ಕನ್ನಡ ಸ್ವಾಮಿಗಳು' ಎಂದು ಹೆಸರಾದ ಶ್ರೀ ಅಲ್ಲಮಪ್ರಭು ಸ್ವಾಮಿಗಳು ನಿತ್ಯ ಸಾಗುತ್ತಿದ್ದಾರೆ. ಈ ಭಾಗದಲ್ಲಿ ಎಲ್ಲಿಯೇ ಕನ್ನಡ ಕಾರ್ಯಕ್ರಮವಿರಲಿ ಅಲ್ಲಿ ಅಲ್ಲಮಪ್ರಭುಗಳ ಉಪಸ್ಥಿತಿ ಇರಲೇಬೇಕು. ಎನ್ನುವಷ್ಟರ ಮಟ್ಟಿಗೆ ಸ್ವಾಮಿಗಳು ಕನ್ನಡದೊಂದಿಗೆ ಬೆರೆತುಕೊಂಡಿದ್ದಾರೆ. ಕನ್ನಡ ಕಾರ್ಯವೆಂದರೆ 'ಬಸವಣ್ಣನ ಕಾಯಕ' ಎಂಬುದನ್ನು ಅರಿತುಕೊಂಡು ಆ ದಿಶೆಯಲ್ಲಿ ನಡೆಯುತ್ತಿದ್ದಾರೆ. ಇಂತಹ ವಿಷಯಗಳು ಅಧ್ಯಯನದ ಮುಖೇನ ತಿಳಿದುಬರುತ್ತವೆ.

ಕನ್ನಡದ ಪ್ರಾಚೀನತೆಯನ್ನು ತಿಳಿಸುವ ಅಪರೂಪದ ದಾಖಲೆಗಳನ್ನು, ನಾಣ್ಯಗಳನ್ನು ಸಂಗ್ರಹಿಸುವ ಸ್ವಾಮಿಗಳ ವಿಶೇಷವಾದ ಹವ್ಯಾಸಗಳು ಅಧ್ಯಯನದಿಂದ ತಿಳಿಯುತ್ತವೆ. ಎಲ್ಲರೂ ಧಾನ್ಯ ಭಿಕ್ಷೆ, ಹಣದ ಭಿಕ್ಷೆಗಳನ್ನು ಕೈಗೊಂಡರೆ ಚಿಂಚಣಿ ಸ್ವಾಮಿಗಳು ಗ್ರಂಥ ಭಿಕ್ಷೆಯ ಮೂಲಕ ಶ್ರೀ ಮಠದಲ್ಲಿ 'ಆದಿಕವಿ ಪಂಪ ಗ್ರಂಥಾಲಯ'ವನ್ನು ನಿರ್ಮಿಸಿದ್ದಾರೆ. ಇಲ್ಲಿ ಪ್ರಾಚೀನ ಹಸ್ತಪ್ರತಿಗಳು, ಮಹತ್ವಪೂರ್ಣವಾದ ಕನ್ನಡದ ದಾಖಲೆಗಳು ಮತ್ತು ಪುಸ್ತಕಗಳು ಸಂಗ್ರಹಗೊಂಡಿವೆ. ಹಿಂದಿನ ಕಾಲದಲ್ಲಿ ಈ ಭಾಗದಲ್ಲಿ ಕನ್ನಡ ಭಾಷೆಯು ಅಧಿಕೃತವಾಗಿತ್ತು ಎಂಬುದನ್ನು ತಿಳಿಸುವ ಅತ್ಯಮೂಲ್ಯವಾದ ಪುರಾವೆಗಳನ್ನು ಗಡಿರಕ್ಷಣಾ ಸಮಿತಿಗೆ ಶ್ರೀಗಳು

ನೀಡಿದ್ದಾರೆ. ಇಂತಹ ಮಹತ್ವಪೂರ್ಣವಾದ ದಾಖಲೆಗಳನ್ನು ಸರಕಾರಕ್ಕೆ ನೀಡಿ ಸಹಕರಿಸಿರುವುದು ಈ ಅಧ್ಯಯನದಿಂದ ಗೊತ್ತಾಗುತ್ತದೆ.

ಹಿಂದೂ-ಮುಸ್ಲಿಂ ಭೇದ ಭಾವವನ್ನು ಮಾಡದೆ 'ನಾವೆಲ್ಲರೂ ಕನ್ನಡಿಗರು, ನಮ್ಮ ಧರ್ಮ ಕನ್ನಡ ಧರ್ಮ' ಎಂಬುದು ಶ್ರೀಗಳ ಅಭಿಮತ. ಅಂತೆಯೇ ಅವರ ಮಠದಲ್ಲಿ ಯಾವುದೇ ರೀತಿಯ ಭೇದ ಭಾವವಿಲ್ಲ. ಬಾಳಿನಬುತ್ತಿ ಕಲಿಕಾಕೇಂದ್ರಕ್ಕೆ ಇಸ್ಲಾಂ ಧರ್ಮದವರನ್ನು ಗುರುಗಳನ್ನಾಗಿ ನೇಮಿಸಿದ್ದರು. ಎಲ್ಲೆಡೆಗೆ ಕೋಮುವಾದದ ದಳ್ಳುರಿ ಹತ್ತಿ ಉರಿಯುತ್ತಿರುವ ಸಂದರ್ಭದಲ್ಲಿ ಚಿಂಚಣಿ ಮಠವು ಕನ್ನಡ ಧರ್ಮದಡಿಯಲ್ಲಿ ಸಹೋದರತೆಯ ಭಾವವನ್ನು ಬೆಳೆಸುತ್ತಿರುವುದು ಅಧ್ಯಯನದಿಂದ ರುಜುವಾತಾಗುತ್ತದೆ.

ಒಂದು ಧರ್ಮವನ್ನು ಪ್ರಧಾನವಾಗಿಟ್ಟುಕೊಂಡು ಯಾವುದೇ ರೀತಿಯ ಧಾರ್ಮಿಕ ಕಾರ್ಯಗಳನ್ನು ಮಾಡಬಹುದು. ಆದರೆ ಧರ್ಮಕ್ಕಿಂತ ಭಾಷೆ ಮತ್ತು ನಾಡು ಮುಖ್ಯ ಎಂಬ ತತ್ವ ಸಿದ್ಧಾಂತಗಳನ್ನು ಮೈಗೂಡಿಸಿಕೊಂಡು ಕಾರ್ಯ ಮಾಡುವವರು ವಿರಳ. ಅಂತಹ ವಿರಳರಲ್ಲಿ ಚಿಂಚಣಿ ಮಠ ಮತ್ತು ಅಲ್ಲಮಪ್ರಭು ಸ್ವಾಮಿಗಳು ಎದ್ದು ಕಾಣುತ್ತಿರುವುದನ್ನು ಅಧ್ಯಯನವು ಸಾಬೀತುಗೊಳಿಸುತ್ತದೆ.

ಇಂದು ಚಿಕ್ಕೋಡಿಯ ಗಡಿಭಾಗದಲ್ಲಿ ಕನ್ನಡ ವಾತಾವರಣ ನಿರ್ಮಾಣವಾಗಿದ್ದರೆ ಅದರ ಶ್ರೇಯಸ್ಸು ಈ ಭಾಗದ ಮಠಾಧೀಶರಿಗೆ ಸಲ್ಲಬೇಕು. ಈ ಎಲ್ಲ ಮಠಾಧೀಶರ ಪ್ರತಿನಿಧಿಯಾಗಿ ಚಿಂಚಣಿಯ ಅಲ್ಲಮಪ್ರಭು ಸ್ವಾಮಿಗಳು ಮತ್ತು ಚಿಂಚಣಿ ಮಠ ಎಂಬುದಕ್ಕೆ ಪ್ರಸ್ತುತ ಅಧ್ಯಯನವು ಮಹತ್ವಪೂರ್ಣವಾದ ಸಾಕ್ಷಿಯನ್ನು ನೀಡುತ್ತದೆ.

ಮಠದ ಅಧಿಕಾರಿಗಳಾಗಿ ಬರುವ ಸ್ವಾಮಿಗಳು ಧಾರ್ಮಿಕ ಕಾರ್ಯಕ್ರಮಗಳನ್ನು ಮತ್ತು ಚಟುವಟಿಕೆಗಳನ್ನು ಮುಂದುವರೆಸಿಕೊಂಡು ಹೋಗುವುದು ಸಹಜ ಮತ್ತು ಸಾಮಾನ್ಯವಾದುದು. ಆದರೆ ಚಿಂಚಣಿ ಮಠದ ಅಧಿಕಾರಿಗಳಾಗಿ ಬಂದ ಅಲ್ಲಮಪ್ರಭು ಸ್ವಾಮಿಗಳು ಕನ್ನಡವನ್ನು ದೇವರು ಮತ್ತು ಧರ್ಮದ ಸ್ಥಾನದಲ್ಲಿಟ್ಟು ಅಗ್ರಪೂಜೆ ಸಲ್ಲಿಸುತ್ತಿದ್ದಾರೆ. ಸದಾಕಾಲವು ಮಠದ ಪೀಠದ ಮೇಲೆ ಮತ್ತು ತಮ್ಮ ವಾಹನದೊಳಗೆ ಕನ್ನಡ ಧ್ವಜ ರಾರಾಜಿಸುತ್ತದೆ. ಇದರಿಂದ ಸಹಜವಾಗಿ ಗ್ರಾಮೀಣ ಜನರು ಶ್ರೀಗಳಿಂದ ಪ್ರಭಾವಿತರಾಗಿ ಅವರ ದಾರಿಯಲ್ಲಿ ಸಾಗುತ್ತಿದ್ದಾರೆ. ಧರ್ಮಪೀಠದಂತಹ ಪ್ರಭಾವಿ ಸ್ಥಾನದಲ್ಲಿದ್ದವರು ಇಂತಹ ಸಾಂಸ್ಕೃತಿಕ ಮತ್ತು ಸಾಹಿತ್ಯಿಕ ಪುನರುಜ್ಜೀವನಕ್ಕೆ ಮನಸ್ಸು ಮಾಡಿದರೆ ಏನೆಲ್ಲವನ್ನೂ ಸಾಧಿಸಬಹುದೆಂಬುದಕ್ಕೆ ಇದೊಂದು ನಿದರ್ಶನವಾಗಿದೆ. ಪ್ರಸ್ತುತ ಅಧ್ಯಯನವು ಈ ಸಂಗತಿಗಳನ್ನು ಅನಾವರಣಗೊಳಿಸುತ್ತದೆ.

## ಅನುಬಂಧ ೧

### ಕನ್ನಡ ಜಾಗೃತಿ ಪುಸ್ತಕ ಮಾಲೆಯ ಕೃತಿಗಳು

೧) ಸೀಮೆ – ಸಂ.ಪ್ರೊ.ಚಂದ್ರಕಾಂತ ಪೋಕಳೆ, ಡಾ. ಅನಿಲ ಕಮತೆ ೧೯೯೨

೨) ಕನ್ನಡ – ಕನ್ನಡಿಗ – ಕರ್ನಾಟಕ – ಸಂ. ಎಲ್.ಎಸ್.ಶೇಷಗಿರಿರಾವ್ ೧೯೯೯
ಗೊ.ರು.ಚೆನ್ನಬಸಪ್ಪ, ರಾ.ನಂ.ಚಂದ್ರಶೇಖರ

೩) ಕನ್ನಡಪರ ಚಿಂತನೆ ಮತ್ತು ಪರಂಪರೆ – ಕಾ.ವೆಂ.ಶ್ರೀನಿವಾಸ ಮೂರ್ತಿ ೨೦೦೦

೪) ಆಧುನಿಕ ಕರ್ನಾಟಕದ ಆತಂಕಗಳು – ರಾ.ನಂ. ಚಂದ್ರಶೇಖರ ೨೦೦೧

೫) ದೈನಂದಿನ ಬದುಕಿನಲ್ಲಿ ಕನ್ನಡ _ ಸಂ. ಗಡಿಕನ್ನಡಿಗರ ಬಳಗ ಚಿಂಚಣಿ ೨೦೦೨

೬) ಕನ್ನಡತನ ಮತ್ತು ಭಾರತೀಯತೆ – ಡಾ. ಪಿ.ವ್ಹಿ. ನಾರಾಯಣ ೨೦೦೨

೭) ಕನ್ನಡ–ಕನ್ನಡ ಬರ್‍ರಿ ನಮ್ಮ ಸಂಗಡ – ಪ್ರೊ.ಚಂದ್ರಶೇಖರ ಪಾಟೀಲ ೨೦೦೨

೮) ಕನ್ನಡ ಕಾಯಕ ಯೋಗಿ, ಡಾ.ಶಿವಬಸವ ಸ್ವಾಮೀಜಿ – ಡಾ.ಬಸವರಾಜ ಜಗಜಂಪಿ೨೦೦೨

೯) ಕನ್ನಡ ಕೋಟೆ ಕೆ.ಎಲ್.ಇ. – ಪ್ರೊ.ಬಿ.ಎಸ್.ಗವಿಮಠ ೨೦೦೨

೧೦) ಕನ್ನಡ ಜಗದ್ಗುರು – ಪ್ರೊ. ಚಂದ್ರಶೇಖರ ವಸ್ತ್ರದ ೨೦೦೩

೧೧) ಕವಿ ಕಣವಿ ಸಂದರ್ಶನ – ಸಂ.ಡಾ. ಜಿ.ಎಂ.ಹೆಗಡೆ ೨೦೦೩

೧೨) ರಂಗ ಭೂಮಿಯ ಕನ್ನಡ ಸಂವೇದನೆ – ಡಾ. ರಾಮಕೃಷ್ಣ ಮರಾಠೆ ೨೦೦೩

೧೩) ಮಹಾಜನ ವರದಿ ಅವಲೋಕನ – ಡಾ. ಓಂಕಾರ ಕಾಕಡೆ ೨೦೦೩

೧೪) ಕರ್ನಾಟಕದ ಹಿಂದುಸ್ತಾನಿ ಸಂಗೀತಗಾರರು – ಪ್ರೊ. ಸದಾನಂದ ಕನವಳ್ಳಿ ೨೦೦೩

೧೫) ಕನ್ನಡ ಕಟ್ಟೋಣ – ಡಾ.ಪಾಟೀಲ ಪುಟ್ಟಪ್ಪ ೨೦೦೩

೧೬) ಕರ್ನಾಟಕ ಏಕೀಕರಣ ಚಳುವಳಿ ಮತ್ತು ಮಹಿಳೆ–ಡಾ. ರತ್ನಶೀಲ ಗುರೆಡ್ಡಿ ೨೦೦೪

೧೭) ನಾಥ ಸಂಪ್ರದಾಯದ ಇತಿಹಾಸ – ಪ್ರೊ. ಚಂದ್ರಕಾಂತ ಪೋಕಳೆ ೨೦೦೪

೧೮) ಬೆಳಗಾವಿ ಜಿಲ್ಲೆಯ ಸಾಹಿತ್ಯ ದರ್ಶನ – ಡಾ. ಪಿ.ಜಿ.ಕೆಂಪಣ್ಣವರ ೨೦೦೪

೧೯) ನಮ್ಮ ನಾಡು, ನುಡಿ ಮತ್ತು ಗಡಿ – ಎಸ್.ವ್ಹಿ.ಪಾಟೀಲ ೨೦೦೫

೨೦) ಕನ್ನಡ ಕೂಲಿ ರಾಮ ಜಾಧವ – ವಿಜಯಲಕ್ಷ್ಮಿ ಭೋಸಲೆ ೨೦೦೫

೨೧) ಕೃಷ್ಣಾ ತೊರೆ – ಸಂ. ಡಾ. ಪಿ.ಜಿ.ಕೆಂಪಣ್ಣವರ ೨೦೦೬
(ಭುಜೇಂದ್ರ ಮಹಿಷವಾಡಿಯವರ ಸಮಗ್ರ ಕಾವ್ಯ)

೨೨) ಇಂಚರ – ಸಂ. ಪ್ರೊ.ಬಿ.ಎಸ್.ಗವಿಮಠ ೨೦೦೭
(ಎಸ್.ಡಿ.ಇಂಚಲರ ಸಮಗ್ರ ಕಾವ್ಯ)

೨೩) ಜ್ಞಾನ ಒಂದು ಇದ್ದ ಮ್ಯಾಲೆ – ಸಂ. ಡಾ. ಪಿ.ಜಿ.ಕೆಂಪಣ್ಣವರ ೨೦೦೭
ಮಾನಕೇನ ಕಡ್ಮಿ ಇಲ್ಲಾ (ಶಿರಗೂರು ಕಲ್ಮೇಶನ ತತ್ವ ಪದಗಳು)

# ಅನುಬಂಧ ೨

## ಅಲ್ಲಮಪ್ರಭು ಸ್ವಾಮಿಗಳು ಸಂಗ್ರಹಿಸಿದ ದಾಖಲೆಗಳು



ON POSTAL SERVICE.

SANKESHWAR
DT. BELGAUM

೧೮೯೨ರಲ್ಲಿ ಅಂಚೆ ಇಲಾಖೆಯ ಮನಿಆರ್ಡರ್ ಫಾರ್ಮ ಕನ್ನಡದಲ್ಲಿತ್ತು



999—75,000—4-03—(04) [Civ.A. 17 a.

ಹಾಜರಾಗಿ ಸಾಕ್ಷಿಯನ್ನು ಕೊಡಲಿಕ್ಕೆ ಸಮನಿನ ನಕಲು.

(ಸಿ. ಪ್ರೊ. ಕೊ. ಕಲಮು ೧೫೯ ಮತ್ತು ೧೬೩.)

ಜಜ್ಜ ಕೋರ್ಟಿನಲ್ಲಿ.

ಮುಕ್ಕಾಮ ... ಇಲ್ಲಿ ... ನಿ॥.

ದಿವಾಣೀ ಮುಕದಮೆ ನಂಬರು ... ಸನ್ ೧೯೦... ನ್ನೈಕಿ.

... ವಾದಿ.

ವಿರುದ್ಧ

... ಪ್ರತಿವಾದಿ.

ದಾವೆ ರೂ.

...ರ್ಲಿನ ವ್ಯಾಜ್ಯದಲ್ಲಿ ... ತರ್ಫೆನಿಂದ ಸಾಕ್ಷಿ ಕೊಡುವ ಸಲುವಾಗಿ ನೀನು ಹಾಜರಾಗುವದು ಅವಶ್ಯವಿರುವ ಕಾರಣ, ಈ ಲೇಖದಿಂದ ನಿನಗೆ ಅಪ್ಪಣೆ ಮಾಡುವದೇನಂದರೆ, ನೀನು ತಾರೀಖು ... ಮಾಹೆ ... ಸನ್ ೧೯೦...ನೇ ಬೆಳಗಿನ ... ಘಂಟೆಗೆ ಸ್ವತಃ ಈ ಕೋರ್ಟಿನ ಮುಂದೆ ಹಾಜರಾಗಬೇಕು. ನಿನ್ನ ಹಾದಿಯ ಖರ್ಚು ಮುಂತಾದದಕ್ಕಾಗಿಯೂ ... ದಿವಸದ ಹೊಟ್ಟೇ ವೆಚ್ಚಕ್ಕಾಗಿಯೂ ರೂ. ... ಇದರ ಸಂಗಡ ಕಳುಹಿಸಲ್ಪಟ್ಟವೆ. ನೀನು ಈ ಹುಕುಮು ಮಾನ್ಯ ಮಾಡದಿದ್ದರೆ, ಸಿವಿಲ್ ಪ್ರೋಸಿಜರ್ ಕೋಡಿನ ೧೭೦ನೇ ಕಲಮಿನಲ್ಲಿ ಹೇಳಿದಂತೆ ಹಾಜರಾಗದೆ ಇರುವದರ ಪರಿಣಾಮಕ್ಕೆ ನೀನು ಒಳಗಾಗುವಿ.

ನೋಟೀಸು — (೧) ಸಾಕ್ಷಿಯನ್ನು ಕೊಡಲಿಕ್ಕಿಲ್ಲದೆ, ಕೇವಲ ದಸ್ತೈವಜನ್ನು ಹಾಜರು ಮಾಡಲಿಕ್ಕೆ ಮಾತ್ರ ನಿನಗೆ ಸಮನು ಮಾಡಲ್ಪಟ್ಟದ್ದರೆ, ಸದರಿ ದಿನದ ಸದರಿ ಘಂಟೆಗೆ ಆ ದಸ್ತೈವಜು ಈ ಕೋರ್ಟಿನಲ್ಲಿ ಹಾಜರಾಗುವಂತೆ ಮಾಡಿದರೆ, ನೀನು ಈ ಸಮನು ಮಾನ್ಯ ಮಾಡಿದಿ ಎಂದು ಎಣಿಸಲಾಗುವದು.

(೨) ಸದರಿ ಬರೆದ ಒಂದು ದಿವಸದಕ್ಕಿಂತ ಹೆಚ್ಚು ವೇಳೆ ನಿನ್ನನ್ನು ಇಟ್ಟು ಕೊಳ್ಳಬೇಕಾದರೆ, ಸದರಿ ದಿವಸದ ಹೊರ್ತು ಪ್ರತಿ ದಿವಸಕ್ಕೆ ರೂ. ... ಯಂತೆ ಭತ್ತೆಯು ನಿನಗೆ ಕೊಡಲಾದೀತು.

ತಾರೀಖು ... ಮಾಹೆ ... ಸನ್ ೧೯೦... ನೇ ದಿವಸ ನಮ್ಮ ಸಹಿ ಮಾಡಿ, ಕೋರ್ಟಿನ ಮೋಹರು ಮಾಡಿ ಕೊಡಲ್ಪಟ್ಟಿತು.

ಖರೆ ನಕಲು.

ಕೋರ್ಟಿನ ಶಿಕ್ಕೆ

ಜಜ್ಜ.

೧೯೦೪ರಲ್ಲಿ ಕೋರ್ಟಿನಿಂದ ಕಳುಹಿಸಿದ ನೋಟಿಸ್‌ಕೂಡ ಕನ್ನಡ ಗ್ರಾಮ್ಯ ಭಾಷೆಯಲ್ಲಿದೆ

## ಅನುಬಂಧ ೩

## ಮಠದ ಸಂಗ್ರಹದಲ್ಲಿರುವ ಸ್ಟಾಂಪುಗಳು












## ಅನುಬಂಧ ೪

### ಶ್ರೀಗಳೊಂದಿಗೆ ನಡೆಸಿದ ಪತ್ರಿಕಾ ಸಂದರ್ಶನ ೧.



ಲಂಕೇಶ ಪತ್ರಿಕೆಯಲ್ಲಿ ದಿ: ೦೭.೧೨.೨೦೦೬ ರಂದು ಪ್ರಕಟವಾದ ಸಂದರ್ಶನ.

ಸಂದರ್ಶಕರು ಮಲ್ಲಿಕಾರ್ಜುನ ಹೆಗ್ಗಳಗಿ.

# ಕನ್ನಡ ಸ್ವಾಮೀಜಿಯ 'ಜಾಗೃತಿ' ಕಳಕಳಿ

ಗಜಾನಂದ ಅಮ್ಮಣಗಿ



ನಿಪ್ಪಾಣಿ,ಅ. 27- ರಾಜಕೀಯ ಸ್ವಾರ್ಥಕ್ಕೆ ಕರ್ನಾಟಕ -ಮಹಾರಾಷ್ಟ್ರ 'ಗಡಿ ಸಮಸ್ಯೆ' ಕನ್ನಡಿಗರ ನೆಮ್ಮದಿ ಹಾಳು ಗೆಡವಿದೆ. ಗಡಿ ತಗಾದೆ ಕೆಲವರ ನಿತ್ಯ ರೂಢಿ..!

ಇದೆಲ್ಲದರ ನಡುವೆಯೂ ಗಡಿಭಾಗದಲ್ಲಿ ಕನ್ನಡ ತನ್ನ ಹಿರಿಮೆ ಕಾಪಾಡಿಕೊಂಡಿದೆ. ಪ್ರತ್ಯೇಕ ಲಿಪಿ ಇಲ್ಲದಿದ್ದರೂ ಇತ್ತೀಚೆಗಷ್ಟೇ ಉದಯವಾಗಿರುವ ಮರಾಠಿಗರ ಭಾಷಾಭಿಮಾನ ನಡುವೆಯೇ ಕನ್ನಡತನ ಮೆರೆಯುತ್ತಿದೆ.

ಕನ್ನಡ ಅತ್ಯಂತ ಪ್ರಾಚೀನ ಭಾಷೆ.. 300 ಕನ್ನಡ ಪರ ಶಾಸನಗಳು ಮಹಾರಾಷ್ಟ್ರದಿಂದಲೇ ಲಭಿಸಿವೆ... ನೂರಾರು ವರ್ಷಗಳ ಹಿಂದೆ ಬ್ರಿಟಿಷರು ಕನ್ನಡ ಬೆಳೆಯಲಿಕ್ಕೆ ಪ್ರೋತ್ಸಾಹ ನೀಡಿದ್ದರು...

ಆಗಿನ ಕೇಂದ್ರ ಸರಕಾರ 7 ರಾಷ್ಟ್ರೀಯ ಭಾಷೆಗಳಲ್ಲಿ ಕನ್ನಡಕ್ಕೆ ಸ್ಥಾನಮಾನ ನೀಡಿತ್ತು... ಈ ಎಲ್ಲ ಅಂಶಗಳಿಗೆ ಚಿಂಚಣಿ ಗ್ರಾಮದ 'ಕನ್ನಡ ಮಠ' ಎಂದೇ ಖ್ಯಾತಿ ಪಡೆದಿರುವ ಅಲ್ಲಮಪ್ರಭು ಸಿದ್ಧಸಂಸ್ಥಾನಮಠದ ಅಲ್ಲಮಪ್ರಭು ಮಹಾಸ್ವಾಮೀಜಿ ದಾಖಲೆಗಳನ್ನು ಒದಗಿಸುತ್ತಾರೆ.

ಈ ಬಗ್ಗೆ 'ವಿಜಯ ಕರ್ನಾಟಕ'ದೊಂದಿಗೆ ಸ್ವಾಮೀಜಿ ತಮ್ಮ ಅನುಭವ ಹಂಚಿಕೊಂಡರು.

ಅವರ ಅಭಿಪ್ರಾಯ ಸಾರ: ದಕ್ಷಿಣ ಮಹಾರಾಷ್ಟ್ರದ ಕೊಲ್ಹಾಪುರ, ಸಾಂಗಲಿ, ಸೊಲ್ಲಾಪುರ, ನಾಂದೇಡ ಈ ಪ್ರದೇಶದ ಶಾಸನಗಳೆಲ್ಲ ಕನ್ನಡದಲ್ಲಿವೆ. ಬಾಲಗಂಗಾಧರ ತಿಲಕ ಅವರೇ ಹೇಳಿದಂತೆ ಒಂದು ಕಾಲಕ್ಕೆ ಮಹಾರಾಷ್ಟ್ರದ ಭಾಷೆ ಮರಾಠಿ ಆಗಿರಲಿಲ್ಲ ಕನ್ನಡವೇ ಆಗಿತ್ತು.

ಇಂದಿನ ಇಡೀ ಮಹಾರಾಷ್ಟ್ರ ಒಂದು ಕಾಲಕ್ಕೆ ಅಚ್ಚಗನ್ನಡ ಪ್ರದೇಶವೇ ಆಗಿತ್ತು, ಮರಾಠಿ ಭಾಷೆಯ ಶೇ. 25 ಕ್ಕಿಂತ ಹೆಚ್ಚಿನ ವಿಧಿಗಳು ಕನ್ನಡವೇ ಆಗಿವೆ. ಮಹಾರಾಷ್ಟ್ರದ ಎಲ್ಲೋರಾ, ಅಜಂತಾ, ಎಲಿಫೆಂಟ್ ಇವೇ ಮೊದಲಾದವುಗಳಲ್ಲಿ ಶಿಲಾ ಕಲಾಕೃತಿಗಳೆಲ್ಲ ಕನ್ನಡಿಗರು ನಿರ್ಮಿಸಿದ್ದು, ಪ್ರಾಚೀನ ಮಹಾರಾಷ್ಟ್ರವನ್ನು ಆಳಿದ ಶಾತವಾಹನ, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ದೇವಗಿರಿ, ಸೇನರು ಮೊದಲಾದವು ಅಚ್ಚಗನ್ನಡ ರಾಜವಂಶಗಳೇ.

ಜೇಜೂರಿ ಖಂಡೋಬಾ (ಮೈಲಾರ), ಪಂಢರಪುರದ ವಿಠ್ಠಲ, ಕೊಲ್ಹಾಪುರದ ಲಕ್ಷ್ಮೀ, ತುಳಜಾಪುರದ ತುಳಜಾಭವಾನಿ ಇವು 'ಕನ್ನಡ' ದೇವತೆಗಳೇ.




1892ರಲ್ಲಿ ಅಂಚೆ ಇಲಾಖೆ ಮನಿಆರ್ಡರ್ ಫಾರಂ ಕನ್ನಡದಲ್ಲಿತ್ತು.

ದಾಖಲೆಗಳು: 115 ವರ್ಷಗಳ ಹಿಂದೆ ಅಂದರೆ 1892 ರಲ್ಲಿ ಅಂಚೆ ಇಲಾಖೆ ಮನಿಆರ್ಡರ್ ಫಾರಂ ಕನ್ನಡದಲ್ಲಿತ್ತು, ಈ ಬಗ್ಗೆ ದಾಖಲೆಯೂ ಇದೆ. ಅದೇ ರೀತಿ, ಅಂಚೆ ಮತ್ತು ತಂತಿ ಇಲಾಖೆ 1974 ರಲ್ಲಿ ಕಳುಹಿಸಿದ ರೇಡಿಯೋ ಲೈಸನ್ಸ್ ನವೀಕರಣ ನೋಟೀಸ್ ಅಚ್ಚ ಕನ್ನಡದಲ್ಲಿದೆ. 1904ರಲ್ಲಿ ಕೋರ್ಟ್‌ನಿಂದ ಕಳುಹಿಸಲ್ಪಟ್ಟ ನೋಟಿಸ್ ಕೂಡ ಸಂಪೂರ್ಣ ಕನ್ನಡದಲ್ಲಿ, ಅದೂ ಕೂಡ ಗ್ರಾಮ್ಯ ಭಾಷೆಯಲ್ಲಿತ್ತು, ಈ ಬಗ್ಗೆಯೂ ದಾಖಲೆಗಳಿವೆ.

ಅದೂ ಅಲ್ಲದೇ ತಮ್ಮದೇ ಮಠದ 1916 ರಲ್ಲಿಯ ಪಹಣಿಪತ್ರ (ಉತಾರ) ಕೂಡ ಕನ್ನಡದಲ್ಲೇ ಇದೆ.

ರಾಷ್ಟ್ರದ 7 ಪ್ರಮುಖ ಭಾಷೆಗಳ ಪಟ್ಟಿಯಲ್ಲಿ ಆರ್‌ಬಿಐ ಈ ಬಾಷೆಯನ್ನು ಬಹು ಹಿಂದೆಯೇ ಪರಿಗಣಿಸಿತ್ತು...ಎನ್ನುತ್ತಾ ಇವಕ್ಕೆಲ್ಲಾ ಪೂರಕ ದಾಖಲೆಗಳನ್ನು ತೋರಿಸುತ್ತಾರೆ.

ಮಹಾರಾಷ್ಟ್ರದ ಪ್ರಭಾವಿ ನಾಯಕರ ಒತ್ತಡಕ್ಕೆ ಮಣಿದು ಕೇಂದ್ರ ಸರಕಾರ ಪ್ರತಿಯೊಂದು ವಿಷಯದಲ್ಲಿ 'ಮಹಾರಾಷ್ಟ್ರ ಪರ ಒಲವು' ತೋರಿಸುವುದರ ಬಗ್ಗೆ ಸ್ವಾಮೀಜಿ ವಿಷಾದ ವ್ಯಕ್ತಪಡಿಸುತ್ತಾರೆ.

ಮಠಕ್ಕೆ ಭೇಟಿ ನೀಡಿದ ಹಲವರು ಸ್ವಾಮೀಜಿಯವರು ಸಂಗ್ರಹಿಸಿದ ಕನ್ನಡಪರ ದಾಖಲೆಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. ಕರ್ನಾಟಕದ ಹಿರಿಮೆ-ಗರಿಮೆಗಳ ಇತಿಹಾಸ ಕನ್ನಡಿಗರಲ್ಲಿ ಸ್ಫೂರ್ತಿ ಕೆಚ್ಚು ಮೂಡಿಸಬೇಕು ಎಂಬುದೇ 'ಕನ್ನಡ ಸ್ವಾಮೀಜಿ'ಗಳ ಉದ್ದೇಶ.




1904ರಲ್ಲಿ ಕೋರ್ಟಿನಿಂದ ಕಳಿಸಿದ ನೋಟಿಸ್ ಕೂಡ ಕನ್ನಡ ಗ್ರಾಮ್ಯ ಭಾಷೆಯಲ್ಲಿದೆ.

ದಿನಾಂಕ: ೨೮.೧೧.೨೦೦೭ ರಂದು ವಿಜಯಕರ್ನಾಟಕದಲ್ಲಿ ಪ್ರಕಟಗೊಂಡ ಸಂದರ್ಶನ

ಸಂದರ್ಶಕರು: ಗಜಾನಂದ ಅಮ್ಮಣಗಿ

## ಅನುಬಂಧ ೫

### ಪತ್ರಿಕಾ ವರದಿಗಳು:



ಪ್ರಜಾವಾಣಿ: ೦೬.೦೩.೨೦೦೬ ಮತ್ತು ಪ್ರಜಾವಾಣಿ: ೨೦.೦೧.೨೦೦೮


ಧಾರವಾಡ
12-10-2002
ಮಾನ್ಯರೆ,
ರಾಜ್ಯೋತ್ಸವದ ಆಮಂತ್ರಣ ಪತ್ರಿಕೆ ತಲುಪಿದೆ.
ಕೃತಜ್ಞತೆಗಳು.

ಚೆನ್ನವೀರ ಕಣವಿಯವರ ಪತ್ರ, ದಿ: ೧೭.೧೦.೨೦೦೩

**ಎನ್. ಬಸವಾರಾಧ್ಯ**
(ಮಾಜಿ ಅಧ್ಯಕ್ಷರು,
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮)

ಶ್ರೀ

ನಂ. ೭೪೩, ೧೨ನೆಯ ಮುಖ್ಯರಸ್ತೆ
ಮೂರನೆಯ ಬ್ಲಾಕ್, ರಾಜಾಜಿನಗರ
ಬೆಂಗಳೂರು-೫೬೦ ೦೧೦
ದೂರವಾಣಿ : ೩೩೮೦೬೦೫

ದಿನಾಂಕ : 25-10-2005

ಪರಮ ಪೂಜ್ಯ ಶ್ರೀ ಮ.ನಿ.ಪ್ರ. ಅಲ್ಲಮಪ್ರಭು ಮಹಾಸ್ವಾಮಿಗಳವರ
ದಿವ್ಯಚರಣಾರವಿಂದಗಳಲ್ಲಿ ಅನಂತ ಪ್ರಣಾಮಗಳು

ಪೂಜ್ಯರೆ:

ತಾವು ಅಭಿಮಾನಪೂರ್ವಕವಾಗಿ ಕಳುಹಿಸಿದ ರಾಜ್ಯೋತ್ಸವ ಹಾಗೂ ಕನ್ನಡ ಜಾಗೃತಿ ಪುಸ್ತಕಮಾಲೆ ೧೯-೨೦ ಪುಸ್ತಕ ಬಿಡುಗಡೆ ಸಮಾರಂಭದ ಆಮಂತ್ರಣ ಪತ್ರಿಕೆ ತಲುಪಿದೆ.

ನಾನು ಸಂಕೇಶ್ವರಕ್ಕೆ ಬಂದಿದ್ದಾಗ ತಮ್ಮ ದರ್ಶನ ಪಡೆದದ್ದಲ್ಲದೆ ಚಿಂಚಣಿಯ ಸಿದ್ಧಸಂಸ್ಥಾನ ಮಠ ಗಡಿ ಕನ್ನಡಿಗರ ಬಳಗವನ್ನು ಸ್ಥಾಪಿಸಿಕೊಂಡು ಗಡಿನಾಡಿನಲ್ಲಿ ಕನ್ನಡ ನಾಡು ನುಡಿಗಳ ಬಗೆಗೆ ತಾವು ನಡೆಸುತ್ತಿರುವ ಮಹತ್ತರ ಕಾರ್ಯಗಳ ಒಂದು ನೈಜ ಚಿತ್ರಣವನ್ನು ಅಲ್ಲಿಯ ಜನತೆ ನೀಡಿತು. ತಾವು ಶ್ರೀಮಠದಿಂದ ಪ್ರಕಟಿಸಿರುವ ಕೃತಿಗಳನ್ನು ಆಶೀರ್ವಾದಪೂರ್ವಕವಾಗಿ ನನಗೆ ನೀಡಿದಿರಿ. ಗಡಿನಾಡಿನಲ್ಲಿ ತಾವು ಮಾಡುತ್ತಿರುವ ಲೋಕೋತ್ತರ ಕಾರ್ಯಗಳು ಸರ್ವರ ಮೆಚ್ಚುಗೆಗೆ ಪಾತ್ರವಾಗಿವೆ

ದಿನಾಂಕ ೨-೧೧-೨೦೦೫ ರಂದು ತಾವು ಹಮ್ಮಿಕೊಂಡಿರುವ ರಾಜ್ಯೋತ್ಸವ ಹಾಗೂ ಜಾಗೃತಿ ಪುಸ್ತಕ ಬಿಡುಗಡೆ ಸಮಾರಂಭ ಅತ್ಯಂತ ಯಶಸ್ವಿಯಾಗಿ ಸಾರ್ಥಕವಾಗಿ ನೆರವೇರಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

ಇಂತು ಅನಂತ ಪ್ರಣಾಮಗಳೊಂದಿಗೆ
ಎನ್. ಬಸವಾರಾಧ್ಯ

ಎನ್. ಬಸವಾರಾಧ್ಯರ ಪತ್ರ, ದಿ: ೨೫.೧೦.೨೦೦೫

# ಅನುಬಂಧ ೭

## ಚಿಕ್ಕೋಡಿ ತಾಲೂಕಿನ ನಕ್ಷೆ



## ಅನುಬಂಧ ೮

**ಆಕರ ಗ್ರಂಥಗಳು:**


೧. ಅರ್ಚನ: ಮಲ್ಲೆ ದೇವರು ಎಚ್.ಪಿ. (ಸಂ), ಶ್ರೀ ಜ. ಶಿವರಾತ್ರಿ ರಾಜೇಂದ್ರ ಸ್ವಾಮಿಗಳ ಪಟ್ಟಾಧಿಕಾರ ಸುವರ್ಣ ಮಹೋತ್ಸವ ಸಮೀತಿ, ಮೈಸೂರು.

೨. ಆರನೇ ವಿಕ್ರಮಾದಿತ್ಯನ ಶಾಸನಗಳು-ಒಂದು ಸಾಂಸ್ಕೃತಿಕ ಅಧ್ಯಯನ: ನಾಗಯ್ಯ ಜೆ.ಎಂ. ೧೯೯೨, ವೀರಶೈವ ಅಧ್ಯಯನ ಅಕ್ಯಾಡಮಿ, ನಾಗನೂರು ರುದ್ರಾಕ್ಷಿಮಠ, ಬೆಳಗಾವಿ.

೩. ಆಧುನಿಕ ಕರ್ನಾಟಕದ ಆತಂಕಗಳು: ರಾ.ನಂ. ಚಂದ್ರಶೇಖರ ೨೦೦೧, ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ.

೪. ಇಂಚರ (ಸಮಗ್ರ ಕಾವ್ಯ): ಬಿ.ಎಸ್. ಗವಿಮಠ (ಸಂ) ೨೦೦೬. ಅಲ್ಲಮ ಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ.

೫. ಕನ್ನಡ ಪರ ಚಿಂತನೆ ಮತ್ತು ಪರಂಪರೆ. ಕಾ.ವೆಂ. ಶ್ರೀನಿವಾಸಮೂರ್ತಿ ೨೦೦೦, ಅಲ್ಲಮ ಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ.

೬. ಕನ್ನಡ ಸಾಹಿತ್ಯ ಚರಿತ್ರೆ, ರಂ.ಶ್ರೀ. ಮುಗಳಿ, ೧೯೯೦, ಗೀತಾ ಬುಕ್ ಹೌಸ್, ಮೈಸೂರು.

೭. ಕರ್ನಾಟಕ ಮಠಗಳು ಮತ್ತು ಕನ್ನಡ ಸಾಹಿತ್ಯ ಕೆ.ರವೀಂದ್ರನಾಥ ೨೦೦೭, ಪ್ರಭುದೇವ ಜನ ಕಲ್ಯಾಣ ಸಂಸ್ಥೆ, ಸೊಂಡೂರು.

೮. ಕಲ್ಯಾಣದ ಹಾದಿ. ಸಿದ್ಧಲಿಂಗ ಪಟ್ಟಣಶೆಟ್ಟಿ (ಸಂ.) ೧೯೯೯, ಶ್ರೀ ಮ.ಜ. ತೋಂಟದ ಡಾ.ಸಿದ್ಧಲಿಂಗ ಸ್ವಾಮಿಗಳ ಪಟ್ಟಾಧಿಕಾರ ರಜತ ಮಹೋತ್ಸವ ಸಮೀತಿ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಡಂಬಳ-ಗದಗ.

೯. ಕರ್ನಾಟಕದ ವೀರಶೈವ ಮಠಗಳು. (ಸಂ.೧) ಚಂದ್ರಶೇಖರ ನಾಗಣಾಪೂರ ೨೦೦೨, ಗೆಳೆಯರ ಪ್ರಕಾಶನ, ಚಿಕ್ಕಮಗಳೂರು.

೧೦. ಕನ್ನಡ ಕನ್ನಡಿಗ ಕರ್ನಾಟಕ, ಎಲ್.ಎಸ್. ಶೇಷಗಿರಿರಾವ, ಗೋ.ರು.ಚನ್ನಬಸಪ್ಪಾ, ರಾ.ನಂ. ಚಂದ್ರಶೇಖರ, ೧೯೯೯, ಅಲ್ಲಮ ಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ.

೧೧. ಕನ್ನಡತನ ಮತ್ತು ಭಾರತೀಯತೆ: ಪಿ.ವ್ಹಿ. ನಾರಾಯಣ, ೨೦೦೨ ಅಲ್ಲಮ ಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ.

೧೨. ಕನ್ನಡ ಕನ್ನಡ ಬರ್‍ರಿ ನಮ್ಮ ಸಂಗಡ: ಚಂಪಾ, ೨೦೦೨, ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ.

೧೩. ಕನ್ನಡ ಕಾಯಕಯೋಗಿ ಡಾ.ಶಿವಬಸವ ಸ್ವಾಮೀಜಿ: ಬಸವರಾಜ ಜಗಜಂಪಿ ೨೦೦೨, ಅಲ್ಲಮ ಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ.

೧೪. ಕನ್ನಡ ಕೋಟೆ, ಕೆ.ಎಲ್.ಇ.: ಬಿ.ಎಸ್. ಗವಿಮಠ೨೦೦೨ ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ.

೧೫. ಕನ್ನಡ ಜಗದ್ಗುರು: ಚಂದ್ರಶೇಖರ ವಸ್ತ್ರದ. ೨೦೦೩ ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ.

೧೬. ಕವಿ ಕಣವಿ ಸಂದರ್ಶನ: ಜಿ.ಎಂ. ಹೆಗಡೆ (ಸಂ) ೨೦೦೩, ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ.

೧೭. ಕರ್ನಾಟಕದ ಹಿಂದುಸ್ತಾನಿ ಸಂಗೀತಗಾರರು: ಸದಾನಂದ ಕನವಳ್ಳಿ, ೨೦೦೩ ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ.

೧೮. ಕನ್ನಡ ಕಟ್ಟೋಣ: ಪಾಪು, ೨೦೦೩, ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ.

೧೯. ಕರ್ನಾಟಕ ಏಕೀಕರಣ ಮತ್ತು ಮಹಿಳೆ: ರತ್ನಶೀಲ ಗುರೆಡ್ಡಿ, ೨೦೦೪ ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ.

೨೦. ಕನ್ನಡ ಕೂಲಿ ರಾಮ ಜಾಧವ: ವಿಜಯಲಕ್ಷ್ಮೀ ಭೋಸಲೆ, ೨೦೦೫ ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ.

೨೧. ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ: ಶಂ. ಬಾ. ಜೋಶಿ. ೧೯೬೨ ಸಮಾಜ ಬುಕ್ ಡಿಪೋ, ಧಾರವಾಡ.

೨೨. ಕೃಷ್ಣಾ ತೊರೆ (ಸಮಗ್ರ ಕಾವ್ಯ): ಪಿ.ಜಿ. ಕೆಂಪಣ್ಣವರ, (ಸಂ) ೨೦೦೫, ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ.

೨೩. ಗಡಿ ನುಡಿ: ನಿಲಗಂಗಾ (ಸಂ) ೨೦೦೭, ಅಮೃತ ಪ್ರಕಾಶನ, ಬೆಳಗಾವಿ.

೨೪. ಚಿಂಚಣಿ ಶ್ರೀ ಪ್ರಭುದೇವರ ಮಠದ ಪರಿಚಯ ಗ್ರಂಥ: ನೀಲಕಂಠ ಸ್ವಾಮಿಗಳು, ೧೯೭೧, ಶ್ರೀ ಶಿವಲಿಂಗದೇವರು ಬೆಂಢವಾಡ.

೨೫. ಜ್ಞಾನ ಒಂದು ಇದ್ದಮ್ಯಾಲೆ ಮಾನಕೇನ ಕಡ್ಮಿ ಇಲ್ಲ: ಪಿ.ಜಿ. ಕೆಂಪಣ್ಣವರ (ಸಂ) ೨೦೦೭, ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ.

೨೬. ದಾಸೋಹ: ರಾಮಕೃಷ್ಣ ಮರಾಠೆ (ಸಂ) ೨೦೦೭, ರುದ್ರಾಕ್ಷಿಮಠ ನಾಗನೂರು, ಬೆಳಗಾವಿ ಅವರ ಪ್ರಸಾದ ನಿಲಯಗಳ ಹಳೆ ವಿದ್ಯಾರ್ಥಿಗಳ ಸಂಘ, ಶಿವಬಸವನಗರ, ಬೆಳಗಾವಿ.

೨೭. ದೈನಂದಿನ ಬದುಕಿನಲ್ಲಿ ಕನ್ನಡ: ಗಡಿಕನ್ನಡಿಗರ ಬಳಗ, ಚಿಂಚಣಿ (ಸಂ) ೨೦೦೨, ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ.

೨೮. ನಮ್ಮ ನಾಡು–ನುಡಿ ಮತ್ತು ಗಡಿ: ಎಸ್.ವ್ಹಿ. ಪಾಟೀಲ, ೨೦೦೫, ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ.

೨೯. ನಾಥ ಸಂಪ್ರದಾಯದ ಇತಿಹಾಸ: ಚಂದ್ರಕಾಂತ ಪೋಕಳೆ (ಅನು) ೨೦೦೪, ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ.
೩೦. ಪ್ರೌಢ ದೇವರಾಯನ ಕಾಲದ ಕನ್ನಡ ಸಾಹಿತ್ಯ: ಶಿವಾನಂದ ವಿ. ೧೯೭೮ ಕ.ವಿ.ವಿ. ಧಾರವಾಡ.
೩೧. ಬೆಳಗಾವಿ ಜಿಲ್ಲೆಯ ಸಾಹಿತ್ಯ ದರ್ಶನ: ಪಿ.ಜಿ. ಕೆಂಪಣ್ಣವರ (ಸಂ) ೨೦೦೪, ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ.
೩೨. ಮಹಾಜನ ವರದಿ ಅವಲೋಕನ: ಓಂಕಾರ ಕಾಕಡೆ, ೨೦೦೩, ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ.
೩೩. ರಂಗಭೂಮಿಯ ಕನ್ನಡ ಸಂವೇದನೆ: ರಾಮಕೃಷ್ಣ ಮರಾಠೆ ೨೦೦೩, ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ.
೩೪. ವೀರಶೈವ ಅಧ್ಯಯನ ಸಂಸ್ಥೆ: ಜಿ.ಎಂ. ಹೆಗಡೆ, ವೀರಶೈವ ಅಧ್ಯಯನ ಅಕ್ಯಾಡೆಮಿ, ನಾಗನೂರು ರುದ್ರಾಕ್ಷಿಮಠ, ಬೆಳಗಾವಿ.
೩೫. ಶೂನ್ಯ ಸಂಪಾದನೆಯನ್ನು ಕುರಿತು: ಎಂ. ಚಿದಾನಂದ ಮೂರ್ತಿ, ೧೯೯೦, ಸ್ನೇಹ ಪ್ರಕಾಶನ, ವಿಜಯನಗರ, ಬೆಂಗಳೂರು.
೩೬. ಶ್ರೀ ದುರುದುಂಡೀಶ್ವರ ಸಿದ್ಧಸಂಸ್ಥಾನಮಠ ಒಂದು ಅಧ್ಯಯನ: ಪ್ರಭಾ ಬೋರಗಾಂವಕರ, ೨೦೦೧, ಲಿಂಗಾಯತ ಅಧ್ಯಯನ ಸಂಸ್ಥೆ, ಶ್ರೀ ವಿರಕ್ತಮಠ, ದೇಶನೂರು.
೩೭. ಸಮಗ್ರ ವಚನ ಸಂಪುಟ (ಜನಪ್ರಿಯ ಆವೃತ್ತಿ): ಎಂ. ಎಂ. ಕಲಬುರ್ಗಿ, ೧೯೯೩ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಲನಾಲಯ, ಬೆಂಗಳೂರು.
೩೮. ಸಾರಂಗ ಶ್ರೀ: ಎಂ.ಎಂ. ಕಲಬುರ್ಗಿ (ಸಂ) ೧೯೯೪, ಪೂಜ್ಯ ಶ್ರೀ ಚೆನ್ನವೀರ ಸ್ವಾಮೀಜಿ ಪ್ರತಿಷ್ಠಾನ ಸಾರಂಗಮಠ, ಸಿಂದಗಿ.
೩೯. ಸಿದ್ಧಗಂಗಾಶ್ರೀ: ಚನ್ನಪ್ಪ ಎರೆಸೀಮೆ (ಸಂ) ೧೯೮೧ ಹಳೆ ವಿದ್ಯಾರ್ಥಿಗಳ ಸಂಘ, ಶ್ರೀ ಸಿದ್ಧಗಂಗಾ ಕ್ಷೇತ್ರ, ತುಮಕೂರು.
೪೦. ಸಿರಿಗನ್ನಡ ತೇರು (ಅಚ್ಚಿನಲ್ಲಿದೆ)
೪೧. ಸೀಮೆ: ಚಂದ್ರಕಾಂತ ಪೋಕಳೆ, ಅನಿಲ ಕಮತೆ (ಸಂ) ೧೯೯೭, ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ, ಚಿಂಚಣಿ.

**ನಿಘಂಟುಗಳು**

೧. ಅಪ್ಪೇ ನಿಘಂಟು

೨. ಅಮರ ಕೋಶ

೩. ಬೆಲಗಮ್ ಡಿಸ್ಟ್ರೀಕ್ಟ್ ಗೆಜಟೀಯರ್ (ಇಂಗ್ಲೀಷ)

೪. ಸಂಕ್ಷಿಪ್ತ ಕನ್ನಡ ನಿಘಂಟು

**ಪತ್ರಿಕೆಗಳು**

೧. ಉದಯವಾಣಿ

೨. ಕನ್ನಡಮ್ಮ

೩. ಕನ್ನಡ ಪ್ರಭ

೪. ಕರ್ನಾಟಕ ಟಾಯಿಮ್ಸ್

೫. ಕೆ.ಎಲ್.ಇ. ವಾರ್ತಾಪತ್ರ

೬. ಗೋವಾ ದರ್ಪಣ

೭. ಚಿಕ್ಕೋಡಿ ಸಮಾಚಾರ

೮. ತರಂಗ

೯. ಪ್ರಜಾವಾಣಿ

೧೦. ಲಂಕೇಶ

೧೧. ವಿಜಯ ಕರ್ನಾಟಕ

೧೨. ಶರಣ ಚೇತನ

೧೩. ಸಂಯುಕ್ತ ಕರ್ನಾಟಕ

೧೪. ಸ್ವಪ್ನ ಲೋಕ

೧೫. ಹಸಿರು ಕ್ರಾಂತಿ

**ಸಂದರ್ಶನಗಳು**

೧. ಶ್ರೀ ಅಲ್ಲಮಪ್ರಭು ಮಹಾಸ್ವಾಮಿಗಳು ಸಿದ್ಧಸಂಸ್ಥಾನ ಮಠ, ಚಿಂಚಣಿ.

೨. ಡಾ. ಗುರುಪಾದ ಮರಿಗುದ್ದಿ, ಸಂಕೇಶ್ವರ.

೩. ಪ್ರೊ. ಎಲ್.ವ್ಹಿ.ಪಾಟೀಲ, ಸಂಕೇಶ್ವರ.